# ರೋಣ ತಾಲೂಕಿನ ಶೈವದೇವಾಲಯಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧಕಿ

ಹೇಮಾವತಿ ಶಿ.ಮೆಣಸಗಿ

ಮಾರ್ಗದರ್ಶಕರು

ಡಾ.ಸಿ.ಎಸ್.ವಾಸುದೇವನ್

ಪ್ರವಾಚಕರು





ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ೫೮೩ ೨೭೬

೨೦೦೯

# ರೋಣ ತಾಲೂಕಿನ ಶೈವದೇವಾಲಯಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕಿ
ಹೇಮಾವತಿ ಶಿ.ಮೆಣಸಗಿ

ಮಾರ್ಗದರ್ಶಕರು
ಡಾ.ಸಿ.ಎಸ್.ವಾಸುದೇವನ್
ಪ್ರವಾಚಕರು





ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೯

## ಮಾರ್ಗದರ್ಶಕರ ದೃಢೀಕರಣ ಪತ್ರ

**ರೋಣ ತಾಲೂಕಿನ ಶೈವದೇವಾಲಯಗಳು** ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ **ಹೇಮಾವತಿ ಸಿ.ಮೆಣಸಗಿ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

C. S. Vasudevan

**ಡಾ. ಸಿ.ಎಸ್.ವಾಸುದೇವನ್**
ಪ್ರವಾಚಕರು ಮತ್ತು ಮಾರ್ಗದರ್ಶಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 08.10.2009

ಸ್ಥಳ : ವಿದ್ಯಾರಣ್ಯ

# ಸಂಶೋಧಕರ ಪ್ರಮಾಣ ಪತ್ರ

ರೋಣ ತಾಲೂಕಿನ ಶೈವದೇವಾಲಯಗಳು ಎಂಬ ಸಂಪ್ರಬಂಧವನ್ನು ಡಾ.ಸಿ.ಎಸ್. ವಾಸುದೇವನ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿ.ಲ್.ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Hemavati. S. Menasigi

ಹೇಮಾವತಿ ಶಿ.ಮೆಣಸಗಿ

ಸಂಶೋಧಕಿ

ಪ್ರಾಚೀನ ಇತಿಹಾಸ ಮತ್ತು

ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೦೮-10-೨೦೦೯

ಸ್ಥಳ : ವಿದ್ಯಾರಣ್ಯ

## ಪರಿವಿಡಿ

# ಸಂಕ್ಷೇಪಗಳು

**SII** : South Indian Inscriptions

**EI** : Epigraphia Indica

ಧಾ.ಜಿ.ಶಾ.ಸೂ.ಸಂ.ರೋ. : ಧಾರವಾಡ ಜಿಲ್ಲಾ ಶಾಸನ ಸೂಚಿ, ಸಂಪುಟ, ರೋಣ

ಕ.ದೇ.ಕೋ.ಗ.ಜಿ. : ಕರ್ನಾಟಕ ದೇವಾಲಯಕೋಶ, ಗದಗ ಜಿಲ್ಲೆ

೧

# ಪ್ರಸ್ತಾವನೆ

ದೇವಾಲಯಗಳು ನಾಡಿನ ಸಾಂಸ್ಕೃತಿಕ ಕೇಂದ್ರಗಳು ಅದರಲ್ಲೂ ಭಾರತದಂತಹ ಸಾಂಪ್ರದಾಯಿಕ ದೇಶದಲ್ಲಿ ದೇವತಾರಾಧನೆಯು ಒಳ್ಳೆಯ ಸಂಸ್ಕೃತಿಯ ಪ್ರಮುಖ ಲಕ್ಷಣವಾಗಿದೆ. ಆದ್ದರಿಂದ ಭಾರತವನ್ನು 'ದೇವಾಲಯಗಳ ಸಮುದ್ರ' ಎಂದರೆ ಅತಿಶಯೋಕ್ತಿ ಎನಿಸಲಾರದು ಅಂತೆಯೇ ಕರ್ನಾಟಕವು ಈ ಸಮುದ್ರಕ್ಕೆ ಸೇರುವ ಪ್ರಮುಖ ನದಿ ಎಂದು ಹೇಳಬಹುದು.

ಈ ದೇವಾಲಯ ರಚನೆಯು ಏಕೆ? ಹೇಗೆ? ಮತ್ತು ಯಾವಾಗ ಹುಟ್ಟಿತು? ಎಂಬ ಪ್ರಶ್ನೆಗಳಿಗೆ ಊಹೆಗಳ ಹೊರತು, ಇದುವರೆಗೂ ಯಾವುದೇ ಸಮಂಜಸವಾದ ಉತ್ತರಗಳನ್ನು ಕಂಡುಕೊಳ್ಳಲಾಗಿಲ್ಲ.

'ದೇವಾಲಯ' ಹೆಸರೇ ಸೂಚಿಸುವಂತೆ ದೇವರ ವಾಸಕ್ಕಾಗಿ ನಿರ್ಮಿಸಿದ ಪವಿತ್ರವಾದ ಸ್ಥಳ. ಮಾನವ ಪ್ರಕೃತಿಯ ಅನನ್ಯ ಶಕ್ತಿಗಳನ್ನು ಜಯಿಸಲಾಗದೇ ಇರುವಂತಹ ಸ್ಥಿತಿಯಲ್ಲಿ ಮತ್ತು ತನ್ನ ನೆಮ್ಮದಿಯ ಜೀವನಕ್ಕೆ ಪೂರಕವಾಗಿ ಕಂಡುಕೊಂಡಂತಹ ಮಾರ್ಗವೆಂದರೆ ದೇವತಾರಾಧನೆ. ಮಾನವ ನಂಬಿದಂತಹದ ಅಭೂತಪೂರ್ವ ಶಕ್ತಿಗಳಲ್ಲಿ 'ದೈವಿಶಕ್ತಿ'ಯು ಪ್ರಮುಖವಾದುದು. ಈ ದೈವ ಎಂಬ ಅಮೂರ್ತ ಶಕ್ತಿಗೆ ಮೂರ್ತಿರೂಪ ನೀಡಿ ಅದನ್ನು ಪೂಜಿಸಲಾರಂಭಿಸಿದನು. ಕೇವಲ ಮೂರ್ತಿರೂಪಕ್ಕೆ ಸೀಮಿತಗೊಳಿಸದೆ ಅದಕ್ಕೆ ಹಲವು ಆಕಾರಗಳ ಕಲ್ಪನೆಯಡಿಯಲ್ಲಿ ಪರಿವಾರಾಲಯಗಳನ್ನು ಸೂಚಿಸಿ ಪ್ರತ್ಯೇಕವಾದ ಸಾಂಪ್ರದಾಯಿಕ ಚೌಕಟ್ಟುಗಳನ್ನು ಹೆಣೆದನು. ಅಲ್ಲದೇ ಅವುಗಳ ರಕ್ಷಣೆಗಾಗಿ ವಾಸ್ತುವನ್ನು ಅನುಸರಿಸಿ ಆಲಯಗಳನ್ನು ನಿರ್ಮಿಸಿದನು. ಹೀಗೆ ದೇವರುಗಳಿಗಾಗಿ ನಿರ್ಮಿಸಿದ ಆಲಯಗಳು ದೇವಾಲಯಗಳೆಂದು ನಾಮಾಂಕಿತಗೊಂಡು ಇಂದಿಗೂ ಕೂಡ ಚರಿತ್ರೆ ರಚನೆಯಲ್ಲಿ ಬಹುಮುಖ್ಯ ಪುರಾತತ್ವೀಯ ಆಕರಗಳಾಗಿ ಪಾತ್ರ ನಿರ್ವಹಿಸುತ್ತಿವೆ.

ದೇವಾಲಯಗಳ ಪ್ರಾಚೀನತೆಯ ಕುರಿತು ಇತಿಹಾಸಕಾರರಲ್ಲಿ ಭಿನ್ನಾಭಿಪ್ರಾಯಗಳಿವೆ. ಹಲವು ವಿದ್ವಾಂಸರು ದೇವಾಲಯಗಳ ಪ್ರಾಚೀನತೆಯನ್ನು ಹರಪ್ಪ ಸಂಸ್ಕೃತಿಯ ಕಾಲದವರೆಗೂ

ಕೊಂಡೊಯ್ದಿದ್ದಾರೆ. ಹರಪ್ಪ ಸಂಸ್ಕೃತಿಯ ಶೋಧನೆಯ ಸಂದರ್ಭದಲ್ಲಿ ದೊರೆತ ಪಶುಪತಿಯ ಮುದ್ರೆಗಳು ಹಾಗೂ ಲಿಂಗ ರಚನೆಯ ಕುರುಹುಗಳು ವಿದ್ವಾಂಸರ ಅಭಿಪ್ರಾಯಕ್ಕೆ ಪುಷ್ಠಿಯನ್ನು ನೀಡುತ್ತವೆ. ಆದರೆ ಇದುವರೆಗಿನ ಶೋಧನೆಗಳಲ್ಲಿ ಅವುಗಳಿಗಾಗಿ ನಿರ್ಮಿಸಿದ ಯಾವುದೇ ದೇವಾಲಯದ ವಾಸ್ತು ರಚನೆಗಳು ಕಂಡುಬಂದಿಲ್ಲ. ಆದ್ದರಿಂದ ಹರಪ್ಪ ಸಂಸ್ಕೃತಿಯಲ್ಲಿ ದೇವಾಲಯಗಳ ರಚನೆ ಇತ್ತೇ? ಎಂಬ ಪ್ರಶ್ನೆಗೆ ಉತ್ತರ ಮರಿಚಿಕೆಯಾಗಿಯೇ ಉಳಿದಿದೆ. ಅಂದರೆ ದೇಗುಲ ವಾಸ್ತುರಚನೆಗೆ ಪೂರ್ವದಲ್ಲಿ ಕೇವಲ ಮೂರ್ತಿಶಿಲ್ಪದ ಆರಾಧನೆ ಇತ್ತೆಂದು ಊಹಿಸಬಹುದಾಗಿದೆ. ಭಾರತದ ಚರಿತ್ರೆಯಲ್ಲಿ ದೇವಾಲಯದ ವಾಸ್ತು ಉದಾಹರಣೆಗಳು ದೊರೆಯುವುದು ಬೌದ್ಧ ಮತ್ತು ಜೈನ ಧರ್ಮಗಳು ಅಸ್ತಿತ್ವಕ್ಕೆ ಬಂದ ನಂತರವೇ. ಅಂದರೆ ಕ್ರಿಸ್ತಶಕದ ಆರಂಭ ಕಾಲದಿಂದಲೇ ದೇವಾಲಯಗಳು ಇದ್ದವೆಂಬ ಮಾಹಿತಿಯು ಶಾಸನಗಳಿಂದ ಲಭ್ಯವಾಗುತ್ತದೆ. ಮೊದಲು ದೇವಾಲಯಗಳು ಮರ, ಇಟ್ಟಿಗೆಗಳಿಂದ ನಿರ್ಮಾಣವಾಗುತ್ತಿದ್ದವು. ಮರದಿಂದ ಮಾಡಿದ ದೇವಾಲಯಗಳ ಸಂಪೂರ್ಣ ರಚನೆಯು ದೊರೆಯದೇ ಹೋದರೂ ಕೆಲವು ಲಭ್ಯವಾದ ಕುರುಹುಗಳ ಆಧಾರದ ಮೇಲೆ, ದೇವಾಲಯಗಳು ಮರದಿಂದ ನಿರ್ಮಾಣವಾಗಿದ್ದವೆಂದು ತಿಳಿಯಬಹುದು. ಮಹಾರಾಷ್ಟ್ರದ ಪುಣೆಯ ಸಮೀಪವಿರುವ ಕಾರ್ಲ, ಬಾಜ್‌ಗಳಲ್ಲಿ ಮೌರ್ಯರ ಕಾಲದಲ್ಲಿಯೇ ನಿರ್ಮಿತವಾದ ಬೌದ್ಧ ಸ್ತೂಪದ ಮೇಲಿನ ಛತ್ರಾವಳಿಯ ಭಾಗವನ್ನು ಮರದಿಂದಲೇ ನಿರ್ಮಿಸಿರುವುದನ್ನು ಇಂದಿಗೂ ಕಾಣಬಹುದು. ಪಲ್ಲವ ಅರಸ ಮಹೇಂದ್ರವರ್ಮನು ತನ್ನ ಮಂಡಗಪಟ್ಟು ಶಾಸನದಲ್ಲಿ ತಾನು ದೇವಾಲಯ ನಿರ್ಮಾಣಕ್ಕೆ ಮರದ ಬಳಕೆಯನ್ನು ಬಿಟ್ಟು ಶಿಲೆಯನ್ನು ಬಳಸಿದುದಾಗಿ ಹೇಳಿಕೊಂಡಿದ್ದಾನೆ. ಇದರಿಂದ ಆರಂಭದಲ್ಲಿ ದೇವಾಲಯಗಳು ಮರದಿಂದಲೇ ನಿರ್ಮಾಣಗೊಳ್ಳುತ್ತಿದ್ದವೆಂಬುದು ಸ್ಪಷ್ಟವಾಗಿದೆ. ಅಂತೆಯೇ ಇಟ್ಟಿಗೆಯಿಂದ ಕಟ್ಟಿದ ದೇವಾಲಯದ ರಚನೆಗಳು ನಮಗೆ ಇಂದಿಗೂ ಲಭ್ಯವಿವೆ. ದಕ್ಷಿಣ ಭಾರತದಲ್ಲೇ ಅತಿ ಪ್ರಾಚೀನ ಮತ್ತು ವಿಶಿಷ್ಟವೆನ್ನಲಾದ ಆಂಧ್ರ ಪ್ರದೇಶದ ಗುಡಿಮಲ್ಲಂ ಎಂಬಲ್ಲಿ ಶೋಧಿಸಲಾದ ಶೈವದೇವಾಲಯ ಹಾಗೂ ನಾಗಾರ್ಜುನಕೊಂಡದಲ್ಲಿ ದೊರೆತ ಶೈವದೇವಾಲಯಗಳು ಇಟ್ಟಿಗೆಯಿಂದ ರಚಿಸಲಾಗಿರುವ ಪ್ರಮುಖ ದೇವಾಲಯಗಳಾಗಿವೆ. ಹಾಗೆಯೇ ಕರ್ನಾಟಕದಲ್ಲಿ ಗದಗ ಜಿಲ್ಲೆಯ ನರಗುಂದದ ವಾಸನ ಎಂಬಲ್ಲಿ ದೊರತ ಶೈವದೇವಾಲಯವು ಇಟ್ಟಿಗೆಯಿಂದ ರಚಿತವಾದುದಾಗಿದೆ. ಇದು ಕರ್ನಾಟಕದಲ್ಲಿಯೇ ಅತೀ ಪ್ರಾಚೀನ ಶೈವದೇವಾಲಯ ಎಂಬುದು ವಿದ್ವಾಂಸರ ಅಭಿಪ್ರಾಯ. ಕಾಲಾನಂತರದಲ್ಲಿ ನಿರ್ಮಿತವಾದ ಎಲ್ಲ ದೇವಾಲಯಗಳು ಶಾಶ್ವತತೆಯ ಬೆಂಬತ್ತಿ ಶಿಲೆಯಿಂದ ರಚಿಸಲ್ಪಟ್ಟವು. ಹೀಗೆ ದೇವಾಲಯಗಳು ದೀರ್ಘಕಾಲದಿಂದ ಆಳುತ್ತ ಬಂದ ಹಲವು ಸಾಮ್ರಾಜ್ಯಶಾಹಿ ರಾಜಮನೆತನಗಳ ಆಶ್ರಯದಲ್ಲಿ ಬೆಳೆದು ಮಹತ್ವದ ಸ್ಥಾನಮಾನವನ್ನು ಗಿಟ್ಟಿಸಿಕೊಂಡವು.

ಆರಂಭ ಹಂತದಲ್ಲಿ ಸಾಮಾನ್ಯ ಲಕ್ಷಣಗಳನ್ನು ಹೊಂದಿದ್ದ ದೇವಾಲಯಗಳು ಹಲವು ಧರ್ಮಗಳಡಿಯಲ್ಲಿ ಇನ್ನೂ ಹೆಚ್ಚು ಅಲಂಕೃತಗೊಂಡು ಮುಂದೆ ಬೆಳೆದಂತೆ ವೈಭವೀಕೃತ ಸ್ವರೂಪವನ್ನು ಪಡೆದವು.

ಧರ್ಮ ಮತ್ತು ದೇವಾಲಯಗಳಿಗೆ ಅವಿನಾಭಾವವಾದ ಸಂಬಂಧವಿದೆ. ಧರ್ಮ ಮತ್ತು ಧಾರ್ಮಿಕ ಚಿಂತನೆಗಳು ಮಾನವ ನಾಗರಿಕತೆಯ ಕೊಡುಗೆಗಳು. ಧರ್ಮ ಬೆಳೆದಂತೆ ದೇವಾಲಯಗಳು ಬೆಳೆದವು. ದೇವರ ಇರುವಿಕೆಯ ಅರಿವಿನಿಂದಲೇ ಧರ್ಮ ಬೆಳವಣಿಗೆ ಹೊಂದಿತು.

ಭಾರತದಂತಹ ವೈವಿಧ್ಯಮಯ ಭೌಗೋಳಿಕ ಪ್ರದೇಶದಲ್ಲಿ ಶೈವ, ವೈಷ್ಣವ, ಬೌದ್ಧ, ಜೈನ, ಕ್ರೈಸ್ತ, ಇಸ್ಲಾಂ ಮುಂತಾದ ಧರ್ಮಗಳು ಅಸ್ತಿತ್ವಕ್ಕೆ ಬಂದು ಇವುಗಳಿಗೆ ಭದ್ರ ನೆಲೆಯೆಂಬಂತೆ ದೇವಾಲಯಗಳು ನಿರ್ಮಾಣಗೊಂಡವು. ಅದರಲ್ಲೂ ಮಧ್ಯಯುಗೀನ ಕಾಲದ ಚರಿತ್ರೆಯನ್ನು ಗಮನಿಸಿದರೆ ದೇವಾಲಯಗಳು ಮಾನವ ಜೀವನದ ಅವಿಭಾಜ್ಯ ಅಂಗಗಳಾಗಿದ್ದವು. ಈ ಕಾಲದಲ್ಲಿಯೇ ಧರ್ಮ ಮತ್ತು ದೇವಾಲಯಗಳೀಗೆ ಹೆಚ್ಚಿನ ಪ್ರಾಶಸ್ತ್ಯ ಒದಗಿ, ಧರ್ಮಗಳಲ್ಲೇ ಸಂಘರ್ಷಗಳುಂಟಾಗಿ ಆಯಾ ಧರ್ಮಗಳಿಗೆ ಪ್ರತ್ಯೇಕ ದೇವಾಲಯಗಳು ಪೈಪೋಟಿಯೆಂಬಂತೆ ನಿರ್ಮಾಣಗೊಂಡವು. ಒಂದಕ್ಕಿಂತ ಇನ್ನೊಂದು ವಿಭಿನ್ನ, ಭವ್ಯ ಹಾಗೂ ವೈಭವಯುತವಾಗತೊಡಗಿದವು. ಮುಂದೆ ಈ ದೇವಾಲಯಗಳು ಕೇವಲ ಧಾರ್ಮಿಕ ಕೇಂದ್ರಗಳಾಗಿ ಉಳೀಯದೇ ವಿದ್ಯಾಕೇಂದ್ರಗಳಾಗಿ, ಆರ್ಥಿಕ ಸಾಮಾಜಿಕ, ನ್ಯಾಯಿಕ ಮತ್ತು ಸಾಂಸ್ಕೃತಿಕ ಕೇಂದ್ರಗಳಾಗಿ ಒಂದು ಪ್ರದೇಶದ ಉನ್ನತಿಯ ಎಲ್ಲ ಕಾರ್ಯಗಳನ್ನೂ ಮಾಡುತ್ತಿದ್ದವು. ದೇವಾಲಯದ ಈ ಎಲ್ಲ ಚಟುವಟಿಕೆಗಳ ಮಾಹಿತಿಗಳನ್ನು ಅರಿಯಲು ಶಾಸನಾಧಾರಗಳೇ ಪ್ರಮುಖ ಸಾಕ್ಷಿಗಳಾಗಿವೆ.

ಎಂ.ಚಿದಾನಂದಮೂರ್ತಿಯವರ ಅಭಿಪ್ರಾಯದಂತೆ, 'ಕರ್ನಾಟಕದಲ್ಲಿ ದೇವಾಲಯ ನಿರ್ಮಾಣಕ್ಕೆ ಹೆಚ್ಚಿನ ಪ್ರಚೋದನೆ ಒದಗಿದ್ದು ಲಕುಲೀಶ-ಪಾಶುಪತ ಸಂಪ್ರದಾಯದ ಶೈವಗುರುಗಳಿಂದ.' ಇವರ ಈ ಹೇಳಿಕೆಯಲ್ಲಿ ಶೈವ ಧರ್ಮವು ಅತಿ ಪ್ರಾಚೀನವಾದದ್ದು ದೇವಾಲಯ ನಿರ್ಮಾಣಕ್ಕೆ ಈ ಧರ್ಮದ ಪ್ರಚೋದನೆಯೇ ಕಾರಣ ಎಂದು ತಿಳಿಯಬಹುದು. ಹೀಗೆ ಶೈವ ಧರ್ಮವು ಪ್ರಾಚೀನ ಧರ್ಮವಾಗಿದ್ದು ನಂತರದಲ್ಲಿ ಉದಯಿಸಿದ ಧರ್ಮ ಮತ್ತು ದೇವಾಲಯಗಳಿಗೆ ಮಾದರಿಯಾಯಿತು ಎಂದು ಅರ್ಥೈಸಬಹುದು. ಒಟ್ಟಾರೆಯಾಗಿ ದೇವಾಲಯಗಳ ಶಾಸ್ತ್ರೀಯ ಅಧ್ಯಯನದಿಂದ ಒಂದು ನಾಡಿನ ಸಂಸ್ಕೃತಿಯನ್ನೇ ತಿಳಿಯಬಹುದು ಎಂದರೆ ಅತಿಶಯೋಕ್ತಿ ಎನಿಸದು.

ಪ್ರಸ್ತುತ "ರೋಣ ತಾಲೂಕಿನ ಶೈವದೇವಾಲಯಗಳು' ಎಂಬ ಶೀರ್ಷಿಕೆಯಡಿಯಲ್ಲಿ ಅಧ್ಯಯನ ಕೈಗೊಂಡು, ರೋಣ ತಾಲೂಕಿನ ಶೈವದೇವಾಲಯಗಳ ವ್ಯವಸ್ಥಿತವಾದ ಹಾಗೂ ವೈಜ್ಞಾನಿಕವಾದ ಅಧ್ಯಯನ ಮಾಡಲು ಪ್ರಯತ್ನಿಸಲಾಗುವುದು.

ಗದಗ ಜಿಲ್ಲೆಯ ಐದು ತಾಲೂಕುಗಳಲ್ಲಿ ಒಂದಾದ ರೋಣ ತಾಲೂಕು ವಿಶಿಷ್ಟವಾದ ಭೌಗೋಳಿಕ ಲಕ್ಷಣವನ್ನು ಹೊಂದಿದ್ದು, ಐತಿಹಾಸಿಕ ಪ್ರಾಮುಖ್ಯತೆಯನ್ನು ಪಡೆದಿದೆ. ಪ್ರಾಗಿತಿಹಾಸದ ಅವಶೇಷಗಳು ಈ ಪ್ರದೇಶದಲ್ಲಿ ದೊರತಿರುವುದರಿಂದ ಇದು ಪ್ರಾಗಿತಿಹಾಸ ಕಾಲಕ್ಕೆ ಸೇರಿದ ನೆಲೆಯಾಗಿತ್ತೆಂದು ತಿಳಿಯಬಹುದು. ಇನ್ನು ಇತಿಹಾಸ ಕಾಲಕ್ಕೆ ಬಂದರೆ, ಈ ಪ್ರದೇಶದ ಉಲ್ಲೇಖವು ಕ್ರಿ.ಶ.೭-ಲನೇ ಶತಮಾನಕ್ಕೆ ಸೇರಿದ ಬಾದಾಮಿ ಶಾಸನದಲ್ಲಿ ದೊರೆಯುತ್ತದೆ. ಈ ಶಾಸನದಲ್ಲಿ 'ರೋಣದ ಶಿವಾಲಯ' ಎಂದು ಉಲ್ಲೇಖವಿದ್ದು, ಇದು ಈ ಪ್ರದೇಶದ ಹೆಸರಿನ ಉಲ್ಲೇಖವನ್ನು ಒಳಗೊಂಡಿರುವ ಮೊದಲ ಶಾಸನವಾಗಿದೆ. ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲ್ಯಾಣದ ಕಲಚೂರಿಗಳು, ದೇವಗಿರಿಯ ಯಾದವರು, ಯಲಬುರ್ಗಿಯ ಸಿಂಧರು, ಹೊಯ್ಸಳರು, ವಿಜಯನಗರದ ಅರಸರು, ಇವರೆಲ್ಲರ ಆಳ್ವಿಕೆಗೆ ಒಳಪಟ್ಟ ರೋಣ ತಾಲೂಕು ಹಲವಾರು ವೈಶಿಷ್ಟ ಪೂರ್ಣ ದೇವಾಲಯಗಳನ್ನು ಒಳಗೊಂಡಂತೆ ಹಲವು ಪ್ರಾಚ್ಯಾವಶೇಷಗಳ ಬೀಡಾಗಿದೆ.

ಶೈವ ಧರ್ಮಕ್ಕೆ ಸಂಬಂಧಿಸಿದ ಶಾಸನಗಳು ಈ ತಾಲೂಕಿನಲ್ಲಿ ಹೇರಳವಾಗಿ ದೊರೆಯುವುದರಿಂದ ಶೈವ ಧರ್ಮಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿರುವುದನ್ನು ಹಾಗೂ ಹಲವು ಶೈವದೇವಾಲಯಗಳು ನಿರ್ಮಾಣವಾಗಿರುವುದನ್ನು ಗಮನಿಸಬಹುದು. ರಾಷ್ಟ್ರಕೂಟರ ಕಾಲದಿಂದ ವಿಜಯನಗರೋತ್ತರ ಕಾಲದವರೆಗಿನ ಹಲವು ಶೈವದೇವಾಲಯಗಳು ಇಂದು ಅಧ್ಯಯನಕ್ಕೆ ಲಭ್ಯವಿವೆ. ಈ ಪ್ರದೇಶದಲ್ಲಿ ಇಷ್ಟು ಪ್ರಮಾಣದಲ್ಲಿ ಶೈವದೇವಾಲಯಗಳು ನಿರ್ಮಾಣವಾಗಲು ಕಾರಣವಾದರೂ ಏನು? ಬೇರೆ ಎಲ್ಲ ಧರ್ಮಗಳಿಗಿಂತ ಶೈವ ಧರ್ಮಕ್ಕೆ ಹೆಚ್ಚಿನ ಪ್ರಾಮುಖ್ಯತೆ ಏಕೆ ನೀಡಲಾಯಿತು? ಇಲ್ಲಿ ಧರ್ಮ ಕಲಹಗಳು ನಡೆದಿರುವ ಸಾಧ್ಯತೆ ಇದೆಯೇ? ಈ ಎಲ್ಲ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಲು ಪ್ರಸ್ತುತ ಅಧ್ಯಯನದಲ್ಲಿ ಪ್ರಯತ್ನಿಸಲಾಗುವುದು.

**ಅಧ್ಯಯನದ ಉದ್ದೇಶ**

ಪ್ರಸ್ತುತ ಅಧ್ಯಯನದ ಶೀರ್ಷಿಕೆ "ರೋಣ ತಾಲೂಕಿನ ಶೈವದೇವಾಲಯಗಳು" ಎಂಬುದಾಗಿದ್ದು, ರೋಣ ತಾಲೂಕು ವ್ಯಾಪ್ತಿಯ ಎಲ್ಲ ಶೈವದೇವಾಲಯಗಳ ದಾಖಲೀಕರಣ, ಅವುಗಳ ವಾಸ್ತುಶೈಲಿ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ವಿಶ್ಲೇಷಣೆಗೆ ಒಳಪಡಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

## ಅಧ್ಯಯನದ ಸಮೀಕ್ಷೆ

ರೋಣ ತಾಲೂಕಿಗೆ ಸಂಬಂಧಿಸಿದಂತೆ ಇಲ್ಲಿನ ಇತಿಹಾಸ ಮತ್ತು ಪುರಾತತ್ವ, ದೇವಾಲಯಗಳು, ಮೂರ್ತಿಶಿಲ್ಪಗಳು, ವೀರಗಲ್ಲುಗಳು ಹಾಗೂ ಶಾಸನಗಳನ್ನು ಕುರಿತಂತೆ ಕೆಲವು ಕಿರು ಪ್ರಬಂಧಗಳು ಮತ್ತು ಬಿಡಿ ಲೇಖನಗಳು ಪ್ರಕಟಗೊಂಡಿರುವುದನ್ನು ಗಮನಿಸಬಹುದು.

ವ್ಹಿ.ಕೆ. ಹೊನವಾಡ ಅವರು ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡಕ್ಕೆ ಸಲ್ಲಿಸಿದ 'ರೋಣ ತಾಲೂಕಿನ ಶಾಸನಗಳು : ಒಂದು ಅಧ್ಯಯನ'(೧೯೯೭) ಎಂಬ ಅಪ್ರಕಟಿತ ಎಂ.ಫಿಲ್ ಪ್ರಬಂಧದಲ್ಲಿ ರೋಣ ತಾಲೂಕಿನಲ್ಲಿ ದೊರೆತಿರುವ ಶಾಸನಗಳ ವಿವರಗಳನ್ನು ನೀಡಲು ಪ್ರಯತ್ನಿಸಿದ್ದಾರೆ. ಈ ಪ್ರಬಂಧವು ರೋಣ ಪ್ರದೇಶವನ್ನಾಳಿದ ರಾಜಮನೆತನಗಳು ಹಾಗೂ ಅವರು ಪೋಷಿಸಿದ ಧರ್ಮ ಮತ್ತು ದೇವಾಲಯಗಳಿಗೆ ನೀಡಿದ ದಾನದತ್ತಿಗಳ ಮಾಹಿತಿ, ದೇವಾಲಯದ ಚಟುವಟಿಕೆಗಳು ಇತ್ಯಾದಿ ವಿಷಯಗಳನ್ನು ಒಳಗೊಂಡಿದೆ.

ರೋಣ ತಾಲೂಕಿಗೆ ಸಂಬಂಧಿಸಿದಂತೆ ಇದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮತ್ತೊಂದು ಎಂ.ಫಿಲ್.ಪ್ರಬಂಧ ನಾಗರಾಜು, ಹು.ತೇರದಾಳರವರ 'ರೋಣ ತಾಲೂಕಿನ ಪ್ರಾಚ್ಯಾವಶೇಷಗಳು'(೧೯೯೫-೯೬) ಈ ಪ್ರಬಂಧವು ಇಲ್ಲಿನ ದೇವಾಲಯಗಳ ಸಂಕ್ಷಿಪ್ತ ವರದಿಯ ಜೊತೆಗೆ ಇಲ್ಲಿನ ಧರ್ಮ, ಶಾಸನಗಳು, ಮೂರ್ತಿಶಿಲ್ಪಗಳು ಮತ್ತು ವೀರಗಲ್ಲುಗಳ ಸಂಕ್ಷಿಪ್ತ ವಿವರಗಳನ್ನು ಒಳಗೊಂಡಿದೆ. ಹಾಗೆಯೇ ರೋಣ ತಾಲೂಕಿನ ಗ್ರಾಮ 'ಸೂಡಿ'ಯ ಕುರಿತು ಎಂ.ಟಿ.ಕಾಂಬ್ಳೆಯವರು 'ಸೂಡಿ - ಒಂದು ಸಾಂಸ್ಕೃತಿಕ ಅಧ್ಯಯನ'(೨೦೦೦) ಎಂಬ ಎಂ.ಫಿಲ್ . ಪ್ರಬಂಧವನ್ನು ಸಲ್ಲಿಸಿದ್ದಾರೆ. ಈ ಪ್ರಬಂಧವು ಕ್ರಿ.ಶ.೯೦೦ ರಿಂದ ಕ್ರಿ.ಶ.೧೨೫೦ರ ಕಾಲಮಿತಿಯನ್ನು ಒಳಗೊಂಡಿದ್ದು, ಸೂಡಿಯ ಐತಿಹಾಸಿಕವಾಗಿ ಪ್ರಾಮುಖ್ಯತೆಯನ್ನು ಪಡೆದ ದೇವಾಲಯಗಳು ಹಾಗೂ ಅವುಗಳ ಹಿನ್ನಲೆ ವಿವರಗಳನ್ನು ಒಳಗೊಂಡಿದೆ.

ನರೇಗಲ್ ಎಂ.ಎಸ್.ರವರು 'ಉತ್ತರ ಗದಗ ಜಿಲ್ಲೆಯ ಶಾಸನಗಳು: ಒಂದು ಅಧ್ಯಯನ' (೨೦೦೭) ಎಂಬ ಪಿ.ಹೆಚ್.ಡಿ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಲ್ಲಿಸಿದ್ದಾರೆ. ಈ ಮಹಾಪ್ರಬಂಧವು ಗದಗಿನ, ಉತ್ತರ ಭಾಗದ ಪ್ರಾಚೀನ ಆಡಳಿತ ಭಾಗಗಳಾದ ಬೆಳ್ವಲ-೩೦೦, ಬೆಣ್ಣದಡಿ ಕೊಳನೂರು, ನರೆಯಂಗಲ್, ಮುಳುಗುಂದ, ಚಿಂಚಲಿ, ಬೆಳ್ವಣಿಕೆ, ಕಿಸುಕಾಡು, ಮಾಸವಾಡಿ, ಪುಲಿಗೆರೆ–೩೦೦ ಇವುಗಳನ್ನು ಸೀಮಿತವಾಗಿರಿಸಿಕೊಂಡು ಅಲ್ಲಿ ದೊರೆತ ಶಾಸನಗಳ ವಿವರಗಳನ್ನು ನೀಡಿದ್ದಾರಲ್ಲದೆ ಕೆಲವು ಅಪ್ರಕಟಿತ ಶಾಸನಗಳನ್ನು ಉಲ್ಲೇಖಿಸಿದ್ದಾರೆ.

ಕನ್ನಡ ವಿಶ್ವವಿದ್ಯಾಲಯದ ಪ್ರಸಾರಂಗವು ಪ್ರಕಟಿಸಿದ, ಬಾಲಸುಬ್ರಮಣ್ಯ, ಸಿ.ಎಸ್. ವಾಸುದೇವನ್ ಹಾಗೂ ರಮೇಶ್ ನಾಯಕರವರು ರಚಿಸಿದ ಕೃತಿ 'ಕರ್ನಾಟಕ ದೇವಾಲಯ ಕೋಶ: ಗದಗ ಜಿಲ್ಲೆ'(೨೦೦೭) ಇದನ್ನು ಜಿಲ್ಲಾವಾರು ದೇವಾಲಯಗಳ ಮತ್ತು ಪ್ರಾಚ್ಯಾವಶೇಷಗಳ ದಾಖಲೀಕರಣದ ಉದ್ದೇಶಕ್ಕಾಗಿ ರಚಿಸಿದ್ದು, ಇದರಲ್ಲಿ ರೋಣ ತಾಲೂಕು ಸೇರಿದಂತೆ ಜಿಲ್ಲೆಯ ಐದೂ ತಾಲೂಕುಗಳಲ್ಲಿನ ದೇವಾಲಯಗಳ ಸಂಕ್ಷಿಪ್ತ ಮಾಹಿತಿಯನ್ನು ಪಡೆಯಬಹುದಾಗಿದೆ.

ಗೇರಾರ್ಡ ಫೋಕೆಮಾ ಅವರು ತಮ್ಮ 'Calukya Architecture'(೨೦೦೩) ಗ್ರಂಥದಲ್ಲಿ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ದೇವಾಲಯ ಹಾಗೂ ವಾಸ್ತುಶೈಲಿಯನ್ನು ವಿವರಿಸಿದ್ದಾರೆ. ಇದರಲ್ಲಿ ರೋಣ ತಾಲೂಕಿನಲ್ಲಿರುವ ಕಲ್ಯಾಣ ಚಾಲುಕ್ಯರ ದೇವಾಲಯ ವಾಸ್ತುಶೈಲಿಯ ವಿವರಣೆಯನ್ನೂ ಪಡೆಯಬಹುದಾಗಿದೆ.

ಎಂ.ಎನ್.ಕಡಪಟ್ಟಿಯವರು ರಚಿಸಿದ ಇತ್ತಿಚೆಗಷ್ಟೆ (೨೦೦೮) ಪ್ರಕಟಗೊಂಡ 'ಪ್ರಾಚೀನ ಕರ್ನಾಟಕದಲ್ಲಿ ಶೈವಧರ್ಮ' ಎಂಬ ಗ್ರಂಥದಲ್ಲಿ ಶೈವ ಧರ್ಮದ ಸವಿವರಣೆಯ ಜೊತೆಗೆ ಕೆಲವು ಪ್ರಾಚೀನ ಶೈವದೇವಾಲಯಗಳ ಉಲ್ಲೇಖಗಳನ್ನು ನೀಡಿರುವರು.

ಈ ಮೇಲಿನ ಎಲ್ಲ ಪ್ರಬಂಧಗಳು ಹಾಗೂ ಗ್ರಂಥಗಳಲ್ಲದೆ, ಆರ್.ಗೋಪಾಲ್ ರವರು ಸಂಪಾದಿಸಿದ ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (೨೦೦೬), ಎಂ.ಚಿದಾನಂದ ಮೂರ್ತಿಯವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (೨೦೦೨), ಹೆಚ್.ಎಸ್. ಗೋಪಾಲ್‌ರಾವ್‌ರವರ ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು- ಒಂದು ಸಾಂಸ್ಕೃತಿಕ ಅಧ್ಯಯನ(೧೯೯೩), ಎಸ್.ಸಿ.ನಂದಿಮಠರ ಕನ್ನಡ ನಾಡಿನ ಚರಿತ್ರೆ: ಕರ್ನಾಟಕದ ಧರ್ಮಗಳು(೨೦೦೯), ಹಾಗೂ ಟಿ.ಎ.ಗೋಪಿನಾಥರವರ **Elements of Hindu Iconography(1993)**, ಕೆ.ಇಸ್ಮಾಯಿಲ್‌ರವರ **Temples of Karnataka(1984)**, ಸಿ. ಕೃಷ್ಣಮೂರ್ತಿರವರ **Saiva Art And Architecture in South India(1985)**, ಎ. ಸೂರ್ಯನಾರಾಯಣಮೂರ್ತಿರವರ **Sri Mukhalingam Temples(1978)** ಅಲ್ಲದೆ ಗುಡಿಮಲ್ಲಂ ನಲ್ಲಿರುವ ಪ್ರಾಚೀನ ಶೈವದೇವಾಲಯದ ವಿಶಿಷ್ಟತೆಯ ವಿವರಗಳನ್ನೊಂಡ ಐ.ಕೆ.ಶರ್ಮರವರ **The Developement of Early Saiva Art And Architecture(1982)** ಶೈವಧರ್ಮವನ್ನು ಮತ್ತು ಶೈವದೇವಾಲಯಗಳನ್ನು ಕುರಿತು ಉಲ್ಲೇಖಿಸುತ್ತವೆ. ಪ್ರಸ್ತುತ ಅಧ್ಯಯನಕ್ಕೆ ಇವು ಪೂರಕ ಮಾಹಿತಿಯನ್ನು ಒದಗಿಸುತ್ತವೆ.

### ಅಧ್ಯಯನದ ವ್ಯಾಪ್ತಿ

ಗದಗ ಜಿಲ್ಲೆಯ ರೋಣ ತಾಲೂಕು ವಿಸ್ತೀರ್ಣದಲ್ಲಿ ಜಿಲ್ಲೆಯ ಅತ್ಯಂತ ದೊಡ್ಡ ತಾಲೂಕಾಗಿದ್ದು ೧೪೯೬೦ ಚ.ಕಿ.ಮೀ. ವಿಸ್ತೀರ್ಣವನ್ನು ಹೊಂದಿದೆ. ಇದು ಬೆಳ್ವಲ-೩೦೦ ನಾಡು, ಪುಲಿಗೆರೆ-೩೦೦ ಹಾಗೂ ಕಿಸುಗಾಡು ೭೦ರ ಆಳ್ವಿಕೆಗೆ ಒಳಪಟ್ಟಿತ್ತು. ಪ್ರಸ್ತುತ ಅಧ್ಯಯನವನ್ನು ಇದೇ ಭೌಗೋಳಿಕ ವ್ಯಾಪ್ತಿಗೆ ಸೀಮಿತಗೊಳಿಸಿ, ಪ್ರಾಗಿತಿಹಾಸ ಕಾಲದಿಂದ ವಿಜಯನಗರದವರೆಗಿನ ಕಾಲಮಿತಿಯನ್ನು ಹಾಕಿಕೊಳ್ಳಲಾಗಿದೆ. ಹಾಗೆಯೇ ಈ ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಹಲವು ದೇವಾಲಯಗಳಲ್ಲಿ ಕೇವಲ ಶೈವದೇವಾಲಯಗಳನ್ನು ಕುರಿತಂತೆ ಶಾಸ್ತ್ರೀಯ ಅಧ್ಯಯನ ನಡೆಸಲಾಗುವುದು.

### ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನದಲ್ಲಿ ರೋಣ ತಾಲೂಕಿನ ಗ್ರಾಮವಾರು ಕ್ಷೇತ್ರಕಾರ್ಯ ಮಾಡುವುದರ ಮೂಲಕ, ಅಲ್ಲಿನ ಶೈವದೇವಾಲಯಗಳ ದಾಖಲೀಕರಣ, ತಳನಕ್ಷೆ ರಚನೆ, ಛಾಯಚಿತ್ರ ಮತ್ತು ಇತರೇ ಸಂಬಂಧಿ ಮಾಹಿತಿಗಳನ್ನು ದಾಖಲಿಸುವುದಾಗಿದೆ. ಶೈವದೇವಾಲಯಗಳಿಗೆ ಸಂಬಂಧಿಸಿದಂತೆ ಶೈವ ಧರ್ಮದ ಪ್ರಾಚೀನತೆ ಮತ್ತು ಬೆಳವಣಿಗೆ, ಕಲೆ, ವಾಸ್ತುಶಿಲ್ಪ, ಶಾಸನಗಳಲ್ಲಿನ ಮಾಹಿತಿ, ದೇವಾಲಯಗಳ ಸಾಂಸ್ಕೃತಿಕ ಚಟುವಟಿಕೆಗಳು ಹಾಗೂ ಮೌಖಿಕ ಪರಂಪರೆ ಮತ್ತು ಸ್ಥಳೀಯ ಚರಿತ್ರೆ ಮುಂತಾದ ಮಾಹಿತಿಗಳನ್ನು ಸಂಗ್ರಹಿಸಿ, ವಿಶ್ಲೇಷಿಸಿ ನಂತರ ನಿಬಂಧ ರಚಿಸಲಾಗುವುದು.

### ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನವನ್ನು ಅಧ್ಯಯನದ ಅನುಕೂಲಕ್ಕಾಗಿ ಐದು ಅಧ್ಯಾಯಗಳಾಗಿ ವಿಭಾಗಿಸಲಾಗಿದ್ದು, ಪ್ರತಿಯೊಂದು ಅಧ್ಯಾಯವು ಅವಶ್ಯಕತೆಗಳಿಗನುಸಾರವಾಗಿ ಉಪ ವಿಭಾಗಗಳನ್ನು ಒಳಗೊಂಡಿದೆ.

ಅಧ್ಯಯನದ ಮೊದಲನೆಯ ಅಧ್ಯಾಯವು ಉದ್ದೇಶ, ಇದುವರೆಗೆ ನಡೆದ ಅಧ್ಯಯನದ ಸಮೀಕ್ಷೆ, ವ್ಯಾಪ್ತಿ, ಅಧ್ಯಯನದ ವಿಧಾನ ಹಾಗೂ ಸ್ವರೂಪಗಳನ್ನು ಒಳಗೊಂಡಿದೆ.

ಎರಡನೆಯ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದ ಭೌಗೋಳಿಕ ಲಕ್ಷಣದ ವಿವರಗಳು, ಇತಿಹಾಸ ಹಿನ್ನಲೆಯ ವಿವರಣೆಯನ್ನು ಒದಗಿಸುವುದಾಗಿದೆ.

ಮೂರನೆಯ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಶೈವ ಧರ್ಮದ ಉಗಮ, ಪ್ರಾಚೀನತೆ, ಬೆಳವಣಿಗೆ ಹಾಗೂ ಕರ್ನಾಟಕದಲ್ಲಿ ಶೈವಧರ್ಮ ಬೆಳೆದು ಬಂದ

ಹಾದಿ, ಅಲ್ಲದೆ ರೋಣ ತಾಲೂಕಿನಲ್ಲಿ ಶೈವ ಧರ್ಮದ ಮಹತ್ವತೆಯ ಕುರಿತು ಚರ್ಚಿಸಲಾಗುವುದು.

ನಾಲ್ಕನೆಯ ಅಧ್ಯಾಯದಲ್ಲಿ ರೋಣ ತಾಲೂಕಿನ ಶೈವದೇವಾಲಯಗಳು, ಅವುಗಳ ವಾಸ್ತುಶೈಲಿ ಹಾಗೂ ಇತರೆ ಕ್ಷೇತ್ರಗಳಲ್ಲಿ ಅವುಗಳು ವಹಿಸಿದ ಪಾತ್ರಗಳ ಬಹುಮುಖಿ ಅಧ್ಯಯನವನ್ನು ನಡೆಸುವುದಾಗಿದೆ.

ಕೊನೆಯ ಅಧ್ಯಾಯನವು ಉಪಸಂಹಾರವಾಗಿದ್ದು, ಪ್ರಸ್ತುತ ಅಧ್ಯಯನದ ಸಮಗ್ರ ವಿವರಗಳನ್ನು ಸಂಕ್ಷಿಪ್ತ ರೂಪದಲ್ಲಿ ಹೇಳುವ ಪ್ರಯತ್ನ ಮಾಡಲಾಗುವುದು.

೨

# ರೋಣ ತಾಲೂಕಿನ ಭೌಗೋಳಿಕ ಲಕ್ಷಣ ಮತ್ತು ಐತಿಹಾಸಿಕ ಹಿನ್ನೆಲೆ

ಯಾವುದೇ ಒಂದು ಪ್ರದೇಶವು ತನ್ನದೇ ಆದ ವಿಶಿಷ್ಟ ಭೌಗೋಳಿಕ ಲಕ್ಷಣಗಳನ್ನು ಹೊಂದಿರುತ್ತದೆ. ಈ ಭೂಲಕ್ಷಣಗಳು ಮಾನವನ ಇರುವಿಕೆಗೆ ಅವಕಾಶಗಳನ್ನು ಒದಗಿಸಿಕೊಟ್ಟು ಆರಂಭದ ಹಂತದಿಂದಲೂ ಮಾನವ ತನ್ನ ಜೀವನ ಕ್ರಮಗಳನ್ನು ನಡೆಸಲು ಅವಕಾಶಗಳನ್ನು ಕಲ್ಪಿಸಿ, ಕಾಲಮಾನದುದ್ದಕ್ಕೂ ಇಲ್ಲಿ ನೆಲೆಸಿದ್ದನೆಂಬುದಕ್ಕೆ ಹಲವಾರು ಕುರುಹುಗಳನ್ನೊದಗಿಸಿ, ಆತನ ಜೀವನ ಕ್ರಮದ ವಿವಿಧ ಮಜಲುಗಳನ್ನು ತಿಳಿಯಲು ಸಹಾಯಕವಾಗಿದೆ.[೧] ಈವರೆಗೆ ನಡೆದು ಬಂದ ಮಾನವ ಜೀವನ ಕ್ರಮದ ಹಾದಿಯನ್ನು ಅಥವಾ ಮಾನವ ಸಂಸ್ಕೃತಿಯ ಬೆಳವಣಿಗೆಯ ಹಂತಗಳನ್ನು ತಿಳಿಯಲು ಭೌಗೋಳಿಕ ಲಕ್ಷಣಗಳು ಬಹುಮುಖ್ಯವಾದ ಪಾತ್ರ ನಿರ್ವಹಿಸುತ್ತವೆ. ಅಂತೆಯೇ ಯಾವುದೇ ಒಂದು ನಿರ್ದಿಷ್ಟ ಪ್ರದೇಶದ ಬಗೆಗಿನ ಅಧ್ಯಯನ ಕೈಗೊಂಡ ಸಂದರ್ಭದಲ್ಲಿ ಅಲ್ಲಿನ ಭೌಗೋಳಿಕ ಲಕ್ಷಣಗಳನ್ನು ತಿಳಿಯಲು ಪ್ರಥಮ ಆದ್ಯತೆ ನೀಡಬೇಕಾದುದು ಅತಿ ಅವಶ್ಯಕ.

ಪ್ರಸ್ತುತ ಅಧ್ಯಯನದ ಪ್ರದೇಶವೂ ತನ್ನದೇ ಆದ ವೈಶಿಷ್ಟಪೂರ್ಣ ಭೂಲಕ್ಷಣಗಳನ್ನು ಮೈಗೂಡಿಸಿಕೊಂಡಿದೆ. ಇದು ಐತಿಹಾಸಿಕ ವಿಶೇಷತೆಯನ್ನು ಹೊಂದಿರುವ ಗದಗ ಜಿಲ್ಲೆಯ ಒಂದು ಭಾಗವಾಗಿದೆ. ಗದಗ ಜಿಲ್ಲೆಯು ಇತ್ತೀಚೆಗೆ ಅಂದರೆ ೧೯೯೭ರಲ್ಲಿ ಧಾರವಾಡ ಜಿಲ್ಲೆಯಿಂದ ವಿಭಜನೆಗೊಂಡು ಸ್ವತಂತ್ರ ಜಿಲ್ಲೆಯಾಗಿ ಮಾರ್ಪಟ್ಟಿದೆ.

## ಭೌಗೋಳಿಕ ಹಿನ್ನೆಲೆ

ರೋಣ ತಾಲೂಕು ಗದಗ ಜಿಲ್ಲೆ ಒಳಗೊಂಡಿರುವ ೫ ತಾಲೂಕುಗಳಲ್ಲಿ ಒಂದಾಗಿದ. ಗದಗ, ನರಗುಂದ, ಮುಂಡರಗಿ ಹಾಗೂ ಶಿರಹಟ್ಟಿಯು ಉಳಿದ ನಾಲ್ಕು ತಾಲೂಕುಗಳಾಗಿವೆ. ಜಿಲ್ಲೆಯ ಅತಿ ದೊಡ್ಡ ತಾಲೂಕು ಎಂಬ ಮುಕುಟವನ್ನು ಇದು ಧರಿಸಿಕೊಂಡಿದೆ. ಅಲ್ಲದೇ ತಾಲೂಕಿನ ಆಡಳಿತ ಕೇಂದ್ರವೂ ಹೌದು.

ಈ ತಾಲೂಕು ಜಿಲ್ಲೆಯಲ್ಲಿ ೭೫° ೩೦' ರಿಂದ ೭೬° ೦೨' ಪೂರ್ವ ರೇಖಾಂಶ ಹಾಗೂ ೧೫° ೩೧' ರಿಂದ ೧೫° ೫೨' ಉತ್ತರ ಅಕ್ಷಾಂಶದವರೆಗೂ ಹರಡಿಕೊಂಡಿದೆ. ಜಿಲ್ಲೆಯ ಈಶಾನ್ಯ ದಿಕ್ಕಿನಲ್ಲಿರುವ ಈ ತಾಲೂಕನ್ನು ದಕ್ಷಿಣದಲ್ಲಿ ಗದಗ, ನೈರುತ್ಯದಲ್ಲಿ ನವಲಗುಂದ, ಪಶ್ಚಿಮದಲ್ಲಿ ನರಗುಂದ ತಾಲೂಕುಗಳು ಹಾಗೂ ಉತ್ತರದಲ್ಲಿ ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲೂಕು, ಪೂರ್ವದಲ್ಲಿ ಕೊಪ್ಪಳ ಕುಷ್ಟಗಿ ಮತ್ತು ಯಲಬುರ್ಗ ತಾಲೂಕುಗಳು ಸುತ್ತುವರೆದಿವೆ.[೨] ಗದಗ ಉಪವಿಭಾಗಕ್ಕೆ ಸೇರಿರುವ ಈ ತಾಲೂಕಿನಲ್ಲಿ ಒಟ್ಟು ೯೭ ಗ್ರಾಮಗಳಿದ್ದು, ರೋಣ, ನರೇಗಲ್, ಹೊಳೆ ಆಲೂರ ಎಂಬ ೩ ಹೋಬಳಿಗಳಿವೆ.

ರೋಣ ತಾಲೂಕಿನ ಒಟ್ಟು ವಿಸ್ತೀರ್ಣ (೧೪೯೧ ಚ.ಕಿ.ಮೀ) ೧೪೯೦೯೧ ಹೆಕ್ಟೇರ್. ಕೃಷಿ ಪ್ರಧಾನ್ಯ ಪ್ರದೇಶವಾಗಿದ್ದರಿಂದ ಅತಿ ಹೆಚ್ಚು ಪ್ರಮಾಣದ ಭೂಮಿ ಸಾಗುವಳಿಗೆ ಮೀಸಲಾಗಿದೆ. ಸಾಗುವಳಿ ಕ್ಷೇತ್ರವು ೧೨೦೫೮೮ ಹೆಕ್ಟೇರ್ ನಷ್ಟಿದ್ದರೆ, ಕೃಷಿಗೆ ಯೋಗ್ಯವಲ್ಲದ ಭೂಮಿ ೮೫೦೩ ಹೆಕ್ಟೇರನಷ್ಟಿದೆ. ೭೯೫೫೭ ಹೆಕ್ಟೇರ್ ನಷ್ಟು ಭೂಮಿಯಲ್ಲಿ ಮುಂಗಾರು ಮಳೆಯನ್ನು ಅವಲಂಬಿಸಿ ಬೆಳೆಯನ್ನು ಬೆಳೆದರೆ, ೯೩೧೮೮ ಹೆಕ್ಟೇರ್ ಭೂಮಿ ಹಿಂಗಾರು ಬೆಳಗಳ ಕ್ಷೇತ್ರವಾಗಿದೆ. ೧೬೨೮೬ ಹೆಕ್ಟೇರ್ ಭೂಮಿಯು ನೀರಾವರಿ ಸೌಲಭ್ಯವನ್ನು ಹೊಂದಿದೆ. ೨೭೬ ಹೆಕ್ಟೇರ್‌ನಷ್ಟು ಪ್ರದೇಶವು ಅರಣ್ಯ ಪ್ರದೇಶವಾಗಿದೆ.

ಈ ತಾಲೂಕು ಹೆಚ್ಚು ಮಟ್ಟಿಗೆ ಬಯಲು ಪ್ರದೇಶವಾಗಿದೆ. ತಾಲೂಕಿನ ಉತ್ತರದಲ್ಲಿ ಮಲಪ್ರಭಾನದಿ ಪೂರ್ವಾಭಿಮುಖವಾಗಿ ಹಡಗಲಿಯವರೆಗೂ ಹರಿದು, ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲೂಕನ್ನು ರೋಣದಿಂದ ಬೇರ್ಪಡಿಸಿದೆ. ಮುಂದೆ ಈ ನದಿ ಬಿಜಾಪುರ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಈ ತಾಲೂಕಿನಲ್ಲಿ ಮಲಪ್ರಭಾನದಿಯನ್ನು ಕೂಡಿಕೊಳ್ಳುವ ಕೆಲವು ಹಳ್ಳಗಳುಂಟು. ಅವುಗಳಲ್ಲಿ ಬೆಣ್ಣೆಹಳ್ಳವು ಮುಖ್ಯವಾದದ್ದು. ನರಗುಂದ, ರೋಣ ತಾಲೂಕುಗಳ ಮಧ್ಯೆ ಈಶಾನ್ಯಾಭಿಮುಖವಾಗಿ ಹರಿದು ಮಾಳವಾಡದ ಉತ್ತರದಲ್ಲಿ ತಾಲೂಕನ್ನು ಪ್ರವೇಶಿಸಿ, ಮೆಣಸಗಿಯ ಪೂರ್ವಕ್ಕೆ ಮಲಪ್ರಭಾ ನದಿಯನ್ನು ಸೇರಿಕೊಳ್ಳುತ್ತದೆ.[೩] ಇಲ್ಲಿಯ ಹವಾಗುಣ ಸಾಮಾನ್ಯವಾಗಿ ಹಿತಕರವೆಂದೇ ಹೇಳಬಹುದು. ಏಪ್ರಿಲ್-ಮೇ ತಿಂಗಳುಗಳಲ್ಲಿ ಅಧಿಕ ಉಷ್ಣಾಂಶವಿರುತ್ತದೆ. ಜೂನ್‌ನಲ್ಲಿ ಮಳೆಗಾಲ ಆರಂಭವಾಗಿ ಉಷ್ಣತೆ ಕಡಿಮೆಯಾಗುತ್ತದೆ. ನವೆಂಬರ್-ಜನವರಿ ತಿಂಗಳುಗಳಲ್ಲಿ ಚಳಿಗಾಲವಿದ್ದು, ಫೆಬ್ರವರಿ ಶುಷ್ಕ ತಿಂಗಳಾಗಿದೆ. ಮೇ ನಿಂದ ಅಕ್ಟೋಬರ್ ತಿಂಗಳವರೆಗೆ ಮಳೆ ಬೀಳುವುದು. ೨೦೦೮ನೇ ಸಾಲಿನ ವರದಿ ಪ್ರಕಾರ ತಾಲೂಕಿನ ಸರಾಸರಿ ಮಳೆ ೬೬೭.೩ ಮಿ.ಮಿ. ಆದರೆ ಇಲ್ಲಿಯ ವಾಡಿಕೆ ಮಳೆಯು ೬೪೯ ಮಿ.ಮಿ. ಇದೆ. ಇಲ್ಲಿ ಶಿಲಾಮಿಶ್ರಿತ ವಿವಿಧ ಮಾದರಿಯ ಮಣ್ಣು

ಕಂಡುಬರುತ್ತದೆ. ತಾಲೂಕಿನ ಹೆಚ್ಚು ಭಾಗ ಎರೆ ಮತ್ತು ನೆರೆ ಮಣ್ಣಿನಿಂದ ಕೂಡಿದೆ. ಕಪ್ಪು ಮಣ್ಣಿನ ಪ್ರದೇಶವೇ ಹೆಚ್ಚೆನ್ನಬಹುದು. ಈ ತಾಲೂಕಿನಲ್ಲಿ ಕೃಷಿಕರು ಭೂಗುಣವನ್ನು ಅವಲಂಭಿಸಿ ಜೋಳ, ಶೇಂಗಾ, ಈರುಳ್ಳಿ, ಹಿಂಜೋಳ, ಗೋಧಿ, ಹತ್ತಿ, ಸೂರ್ಯಕಾಂತಿ, ಕುಸುಬಿ ಅಲ್ಲದೇ ಇತರ ದ್ವಿದಳ ಧಾನ್ಯಗಳನ್ನು ಬೆಳೆಯುವರಲ್ಲದೇ ವಿವಿಧ ಹಣ್ಣು ಮತ್ತು ತರಕಾರಿಗಳನ್ನು ಬೆಳೆಯುತ್ತಾರೆ. ಇದು ಬಯಲು ಸೀಮೆಯ ಪ್ರದೇಶವಾಗಿದ್ದು, ಅಲ್ಲಲ್ಲಿ ಸಣ್ಣ ಪುಟ್ಟ ಗುಡ್ಡಗಳು ಕಾಣಸಿಗುತ್ತವೆ. ತಾಲೂಕಿನ ಅಲ್ಪಭಾಗ ಅರಣ್ಯ ಪ್ರದೇಶವಾಗಿದ್ದು, ಮುಳ್ಳುಕಾಡು ಹಾಗೂ ಕುರುಚಲು ಗಿಡಗಳು ಕಂಡುಬರುತ್ತವೆ.

ರೋಣ ತಾಲೂಕು ಧಾರವಾಡ ಮಾದರಿಯ ಶಿಲಾ ಪ್ರಭೇದಗಳಿಂದೊಳಗೊಂಡಿದ್ದು, ಇಲ್ಲಿ ಬೆಣಚುಕಲ್ಲು, ಸುಣ್ಣಕಲ್ಲು ಮತ್ತು ಜೋಡಿಯ ಚಿಪ್ಪುಕಲ್ಲುಗಳು ದೊರೆಯುತ್ತವೆ. ಧಾರವಾಡ ಪ್ರಭೇದದ ಪದರ ಶಿಲೆಗಳನ್ನೊಳಗೊಂಡ ಈ ಪ್ರದೇಶದ ಕೆಲವು ಭಾಗಗಳು ಡಾಲರೈಟ್ ದಿಂಡುಗಳನ್ನೊಳಗೊಂಡಿರುವುದನ್ನು ಕಾಣಬಹುದು. ಅಲ್ಲದೇ ಇಲ್ಲಿ ಕರೇಕಲ್ಲು ಮತ್ತು ಕೆಲವು ಮೋಡಿಯ ಕಲ್ಲುಗಳು ಕಂಡುಬರುತ್ತವೆ.[೪]

## ರೋಣ ತಾಲೂಕಿನ ಪ್ರಾಗಿತಿಹಾಸ

ರೋಣ ತಾಲೂಕು ಪ್ರಾಗಿತಿಹಾಸದ ಪ್ರಮುಖ ನೆಲೆ ಎಂಬದು ಹಲವು ಆಧಾರಗಳಿಂದ ಸಾಬೀತಾಗಿದೆ. ಈ ತಾಲೂಕಿನಲ್ಲಿ ಕೈಗೊಂಡ ಸಂಶೋಧನೆ ಮತ್ತು ಅನ್ವೇಷಣೆಯ ಪರಿಣಾಮವಾಗಿ ಇದರ ಚರಿತ್ರೆಯು ಶಿಲಾಯುಗ ಕಾಲದಿಂದಲೇ ಪ್ರಾರಂಭವಾಗುತ್ತದೆ ಎಂದು ತಿಳಿದುಬರುತ್ತದೆ. ಈ ತಾಲೂಕಿನ ಹಲವು ನೆಲೆಗಳು ಶಿಲಾಯುಗ ಸಂಸ್ಕೃತಿಗೆ ಒಳಪಟ್ಟಿದ್ದು, ಇಲ್ಲಿ ನಡೆಸಿದ ಅನ್ವೇಷಣೆಯಲ್ಲಿ ದೊರೆತ ಉಪಕರಣಗಳು, ವಾಸ್ತವ್ಯದ ನೆಲೆಗಳು, ಗೋರಿಗಳು ಮತ್ತು ಮಡಿಕೆ ಚೂರುಗಳು ಮುಂತಾದ ಕುರುಹುಗಳು ಆ ಸಂಸ್ಕೃತಿಯು ಇಲ್ಲಿ ನೆಲೆಸಿತ್ತು ಎಂಬುದಕ್ಕೆ ಸ್ಪಷ್ಟ ಚಿತ್ರಣವನ್ನು ಒದಗಿಸುತ್ತವೆ. ಇದಕ್ಕೆ ಪೂರಕವಾಗಿ ಇಲ್ಲಿನ ಭೌಗೋಳಿಕ ಲಕ್ಷಣಗಳು ಸಹಕಾರಿಯಾದುದನ್ನು ಈಗಲೂ ಸಹ ಗಮನಿಸಬಹುದು.

ರೋಣ ತಾಲೂಕಿನಲ್ಲಿ ಒಟ್ಟು ೨೪ ಪ್ರಾಗಿತಿಹಾಸದ ನೆಲೆಗಳು ಪತ್ತೆಯಾಗಿವೆ. ಅವುಗಳು ಆದಿಹಳೇ ಶಿಲಾಯುಗ, ಸೂಕ್ಷ್ಮ ಶಿಲಾಯುಗ, ನವ ಶಿಲಾಯುಗ, ಶಿಲಾತಾಮ್ರಯುಗ ಮತ್ತು ಬೃಹತ್ ಶಿಲಾಯುಗ ಹಾಗೂ ಆದಿ ಇತಿಹಾಸಕಾಲಕ್ಕೆ ಸೇರಿದಂತವುಗಳಾಗಿವೆ. ಆದರೆ ಈ ಪ್ರದೇಶದಲ್ಲಿ ಮಧ್ಯ ಮತ್ತು ಅಂತ್ಯ ಹಳೇಶಿಲಾಯುಗದ ಯಾವುದೇ ನೆಲೆಗಳು ಕಂಡುಬಂದಿಲ್ಲ. ಈ ತಾಲೂಕಿನಲ್ಲಿ ದೊರೆತ ಪ್ರಾಗಿತಿಹಾಸ ನೆಲೆಗಳ ವಿವರವನ್ನು ಈ ಮುಂದಿನ ಕೋಷ್ಟಕದಲ್ಲಿ ಗಮನಿಸಬಹುದು.

## ರೋಣ ತಾಲ್ಲೂಕು

| ಕ್ರ ಸಂ. | ಗ್ರಾಮ | ಹಳೆ ಶಿಲಾಯುಗ | | | ಸೂಕ್ಷ್ಮ ಶಿಲಾಯುಗ | ನೂತನ ಶಿಲಾಯುಗ | ಶಿಲಾ ತಾಮ್ರಯುಗ | ಬೃಹತ್ ಶಿಲಾಯುಗ | | ಇತಿಹಾಸ ಆರಂಭಿಕಾಲ | ಒಟ್ಟು |
|---|---|---|---|---|---|---|---|---|---|---|---|
| | | ಆದಿ | ಮಧ್ಯ | ಅಂತ್ಯ | | | | ನೆಲೆ | ಗೋರಿ | | |
| ೧ | ಅಮರಗೋಳ | | | | | ೧ | | | | | ೧ |
| ೨ | ಅಸೂಟಿ | ೧ | | | | | | | | | ೧ |
| ೩ | ಉಣಚಗೇರಿ | | | | | | | | ೧ | | ೧ |
| ೪ | ಉದಗಟ್ಟಿ | | | | | | | | ೧ | ೧ | ೨ |
| ೫ | ಕಾಲಕಾಲೇಶ್ವರ | | | | | | | | ೧ | ೧ | ೨ |
| ೬ | ಕುಂಟೋಜಿ | | | | | | | | | ೧ | ೧ |
| ೭ | ಕೌಜಗೇರಿ | ೧ | | | | | ೧ | | | | ೨ |
| ೮ | ಗಜೇಂದ್ರಗಡ | | | | | | | | ೧ | | ೧ |
| ೯ | ಗೋಗೇರಿ | | | | | | | | ೧ | | ೧ |
| ೧೦ | ಗೌಡಗೇರಿ | | | | | | | ೧ | ೧ | | ೨ |
| ೧೧ | ನಿಡಗುಂದಿ | | | | | ೧ | | | | | ೧ |
| ೧೨ | ಬಸರಕೋಡ | ೧ | | | | | ೧ | | | | ೨ |
| ೧೩ | ಬೆಣಚಮಟ್ಟಿ | ೧ | | | | | ೧ | | | | ೨ |
| ೧೪ | ಬೆಳವಣಿಕೆ | ೧ | | | | | ೧ | | | | ೨ |
| ೧೫ | ಮೆಣಸಗಿ | ೧ | | | | ೧ | | | | | ೨ |
| ೧೬ | ಯಾವಗಲ್ | | | | | ೧ | | | | | ೧ |

| ಕ್ರ ಸಂ. | ಗ್ರಾಮ | ಹಳೆ ಶಿಲಾಯುಗ | | | ಸೂಕ್ಷ್ಮ ಶಿಲಾಯುಗ | ನೂತನ ಶಿಲಾಯುಗ | ಶಿಲಾ ತಾಮ್ರಯುಗ | ಬೃಹತ್ ಶಿಲಾಯುಗ | | ಇತಿಹಾಸ ಆರಂಭಕಾಲ | ಒಟ್ಟು |
|---|---|---|---|---|---|---|---|---|---|---|---|
| | | ಆದಿ | ಮಧ್ಯ | ಅಂತ್ಯ | | | | ನೆಲೆ | ಗೋರಿ | | |
| ೧೭ | ರಾಜೂರು | | | | | | | | ೧ | | ೧ |
| ೧೮ | ಲಿಂಗದಾಳ್ | | | | | ೧ | | | | | ೧ |
| ೧೯ | ಜಿಗೇರಿ | ೧ | | | | | | | | | ೧ |
| ೨೦ | ಸವಡಿ | | | | | ೧ | | | | | ೧ |
| ೨೧ | ಹಡಗಲಿ | | | | | ೧ | | | | | ೧ |
| ೨೨ | ಹಿರೇಹಾಳ | | | | | | ೧ | ೧ | | ೧ | ೩ |
| ೨೩ | ಹೊಸಳ್ಳಿ | | | | | | | | | ೧ | ೧ |
| ೨೪ | ಹೊಳೆ ಆಲೂರು | ೧ | | | ೧ | | ೧ | | | | ೩ |
| | ಒಟ್ಟು | ೮ | | | ೧ | ೭ | ೫ | ೨ | ೭ | ೬ | ೩೬ |

ಈ ಕೋಷ್ಟಕವನ್ನು ಆರ್.ಗೋಪಾಲ್‌ರವರು ಸಂಪಾದಿಸಿದ 'ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ'[೫] ಎಂಬ ಕೃತಿಯಲ್ಲಿ ಕೆ.ಬಿ.ಶಿವತಾರಕ್‌ರವರು ಬರೆದ 'ಗದಗ ಜಿಲ್ಲೆಯ ಪ್ರಾಗಿತಿಹಾಸ' ಎಂಬ ಲೇಖನದಿಂದ ಆಯ್ದುಕೊಳ್ಳಲಾಗಿದೆ. ಕೆ.ಬಿ.ಶಿವತಾರಕ್‌ರವರು ತಾವೇ ಸಂಪಾದಿಸಿದ 'ಕರ್ನಾಟಕ ಪುರಾತತ್ವ ನೆಲೆಗಳು' ಎಂಬ ಕೃತಿಯಲ್ಲಿ, ರೋಣದಲ್ಲಿ ಒಟ್ಟು ೨೩ ಪ್ರಾಗಿತಿಹಾಸ ನೆಲೆಗಳನ್ನು ಮಾತ್ರ ನಮೂದಿಸಿದ್ದರು. ಆದರೆ ಇತ್ತೀಚೆಗಷ್ಟೆ ಪ್ರಕಟವಾದ ಈ ಲೇಖನದಲ್ಲಿ ಲಿಂಗದಾಳ್ ಎಂಬ ನೂತನ ಶಿಲಾಯುಗ ಸಂಸ್ಕೃತಿಯ ನೆಲೆಯನ್ನು ಹೊಸದಾಗಿ ಸೇರಿಸಿದ್ದಲ್ಲದೆ, ಹೊಳೆ ಆಲೂರಿನಲ್ಲಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿ ಇದ್ದುದನ್ನು ಗುರುತಿಸಿದ್ದಾರೆ. ಆದ್ದರಿಂದ ಇತ್ತೀಚೆಗಷ್ಟೆ ಬದಲಾವಣೆಗೊಂಡ ಈ ಕೋಷ್ಟಕವನ್ನು ಅಧ್ಯಯನದ ಅನುಕೂಲಕ್ಕಾಗಿ ಇಲ್ಲಿ ಬಳಸಿಕೊಳ್ಳಲಾಗಿದೆ.

ಈ ಮೇಲಿನ ಕೋಷ್ಟಕದಿಂದ, ರೋಣ ತಾಲೂಕು ಗದಗ ಜಿಲ್ಲೆಯಲ್ಲಿಯೇ ಅತೀ ಹೆಚ್ಚು ಪ್ರಾಗಿತಿಹಾಸದ ನೆಲೆಗಳನ್ನು ಹೊಂದಿರುವ ಪ್ರದೇಶವಾಗಿದೆ ಎಂದು ತಿಳಿದುಬರುತ್ತದೆ. ಈ ಪ್ರಾಗಿತಿಹಾಸ ನೆಲೆಗಳಲ್ಲಿ ದೊರೆತ ಕುರುಹುಗಳ ವಿವರಣೆಯನ್ನು ಈ ಕೆಳಗಿನಂತೆ ಸಂಕ್ಷಿಪ್ತವಾಗಿ ತಿಳಿಯಬಹುದು.

## ಆದಿ ಹಳೇಶಿಲಾಯುಗ ಸಂಸ್ಕೃತಿ

ರೋಣ ತಾಲೂಕಿನಲ್ಲಿ ಒಟ್ಟು ೮ ಆದಿ ಹಳೇಶಿಲಾಯುಗ ಸಂಸ್ಕೃತಿಯ ನೆಲೆಗಳು ದೊರೆತಿವೆ. ಇಲ್ಲಿ ದೊರತಿರುವ ಉಪಕರಣಗಳನ್ನು ಕ್ವಾರ್ಟ್ಸ್, ಮರಳುಗಲ್ಲು, ಸಿಸ್ಟನ ವಿವಿಧ ಮಾದರಿ ಹಾಗೂ ಗ್ರಾನೈಟ್ ಮದರಿಯ ಶಿಲಾ ಮಾದರಿಗಳಿಂದ ರೂಪಿಸಲಾಗಿದೆ. ಈ ಮಾದರಿಯ ಶಿಲೆಗಳು ಸ್ಥಳೀಯವಾಗಿಯೇ ದೊರಕುವಂಥ ಇವುಗಳನ್ನು ಇಲ್ಲಿಯೇ ರೂಪಿಸಲಾಗಿದೆ ಎಂದು ತಿಳಿಯುತ್ತದೆ. ಅಲ್ಲದೇ ಕೆಲವು ಉಪಕರಣಗಳಲ್ಲಿ ಅಬ್ಬೆವಿಲಿಯನ್, ಅಶೂಲಿಯನ್ ಮತ್ತು ಲೆವಾಲಿಯಸ್ ತಾಂತ್ರಿಕತೆ ಬಳಸಿರುವುದನ್ನು ಕಾಣಬಹುದಾಗಿದೆ. ದೊರೆತಂತಹ ವಿವಿಧ ಉಪಕರಣಗಳೆಂದರೆ, ಚಕ್ಕೆಕಲ್ಲು, ಉಂಡೆಕಲ್ಲುಗಳು, ಅಂಡಾಕಾರ, ಸೀಳುಗತ್ತಿ, ಮಚ್ಚುಗತ್ತಿ ಚಕ್ರಾಕಾರದ ಉಪಕರಣ, ಹೆರೆಗತ್ತಿ ಮೊದಲಾದವುಗಳು.[೬]

## ಸೂಕ್ಷ್ಮ ಶಿಲಾಯುಗ ಸಂಸ್ಕೃತಿ

ರೋಣ ತಾಲೂಕಿನಲ್ಲಿ ಸೂಕ್ಷ್ಮಶಿಲಾಯುಗ ಸಂಸ್ಕೃತಿ ಕಂಡುಬರುವುದು ಹೊಳೆ ಆಲೂರಿನಲ್ಲಿ ಮಾತ್ರ, ಇದು ಜಿಲ್ಲೆಯಲ್ಲಿಯೇ ಏಕೈಕ ಸೂಕ್ಷ್ಮ ಶಿಲಾಯುಗದ ನೆಲೆಯಾಗಿದೆ. ದೊರೆತಿರುವ ಉಪಕರಣಗಳ ಹಿನ್ನೆಲೆಯಲ್ಲಿ ಯಾವುದೇ ಹೆಚ್ಚಿನ ಮಾಹಿತಿಯನ್ನು ಪಡೆದುಕೊಳ್ಳಲು ಸಾಧ್ಯವಾಗಿಲ್ಲ.[೭]

**ನೂತನ ಶಿಲಾಯುಗ ಸಂಸ್ಕೃತಿ**

೭ ನೂತನ ಶಿಲಾಯುಗ ಸಂಸ್ಕೃತಿಯ ನೆಲೆಗಳು ರೋಣ ತಾಲೂಕಿನಲ್ಲಿ ದೊರೆತಿವೆ. ಇಲ್ಲಿ ಉಜ್ಜಿ ನಯಗೊಳಿಸಿದ ಶಿಲಾಕೊಡಲಿ ಹಾಗೂ ಮತ್ತಿತರ ಉಪಕರಣಗಳು ಕಂಡುಬಂದಿದ್ದು, ಮತ್ತು ಮಹತ್ವವೆನಿಸಿದ ಬ್ರಹ್ಮಗಿರಿ ಮಾದರಿಯ ಕಂದು ವರ್ಣದ ಮತ್ತು ಬೂದು ವರ್ಣದ ಮಡಕೆ ಭಾಗಗಳು ದೊರೆತಿವೆ.[೮]

**ಶಿಲಾತಾಮ್ರಯುಗ ಸಂಸ್ಕೃತಿ**

ರೋಣ ತಾಲೂಕಿನಲ್ಲಿ ಶಿಲಾ ತಾಮ್ರಯುಗ ಸಂಸ್ಕೃತಿ ಕಂಡುಬರುವ ಒಟ್ಟು ೫ ನೆಲೆಗಳು ದೊರೆತಿದ್ದು, ಜಿಲ್ಲೆಯಲ್ಲಿಯೇ ಈ ಸಂಸ್ಕೃತಿಯ ಕುರುಹುಗಳು ದೊರೆತಿರುವ ಏಕೈಕ ತಾಲೂಕು ಪ್ರದೇಶವಾಗಿದೆ. ಇಲ್ಲಿ ಬ್ರಹ್ಮಗಿರಿ ಮಾದರಿಯ ಕಂದು ವರ್ಣದ ಮಡಕೆ ಚೂರುಗಳು ಹಾಗೂ ಸೂಕ್ಷ್ಮ ಶಿಲೋಪಕರಣಗಳಾದ ಇಬ್ಬದಿ ನೀಳಚಕ್ಕೆಗಳು ಮತ್ತು ಉಬ್ಬೇಣು ನೀಳಚಕ್ಕೆ ಉಪಕರಣಗಳು ದೊರೆತಿವೆ.[೯]

**ಬೃಹತ್ ಶಿಲಾಯುಗ ಸಂಸ್ಕೃತಿ**

ಈ ಸಂಸ್ಕೃತಿಯ ಹಂತದಲ್ಲಿ ಮುಖ್ಯವಾಗಿ, ಒಂದು ವಾಸ್ತವ್ಯದ ನೆಲೆಯಾದರೆ, ಮತ್ತೊಂದು ಗೋರಿ ನೆಲೆಯಾಗಿದೆ. ರೋಣ ತಾಲೂಕಿನಲ್ಲಿ ಎರಡೂ ರೀತಿಯ ನೆಲೆಗಳು ಕಂಡುಬಂದಿವೆ. ಗೌಡಗೇರಿ ಮತ್ತು ಹಿರೇಹಾಳ್‌ಗಳಲ್ಲಿ ವಾಸ್ತವ್ಯದ ನೆಲೆಗಳು ಕಂಡುಬಂದಿದ್ದು, ಇಲ್ಲಿ ಕಪ್ಪು-ಕೆಂಪು ವರ್ಣದ ಮಡಕೆ ಚೂರುಗಳು ದೊರೆತಿವೆ. ಹಾಗೆಯೇ ಜಿಲ್ಲೆಯಲ್ಲಿಯೇ ಅತಿ ಹೆಚ್ಚು ಗೋರಿ ನೆಲೆಗಳು ಕಂಡುಬಂದಿರುವುದು ರೋಣ ತಾಲೂಕಿನಲ್ಲಿಯೆ ಒಟ್ಟು ೭ ಗೋರಿ ನೆಲೆಗಳು ದೊರೆತಿದ್ದು ಶಿಲಾವೃತ್ತಗಳು, ಅಸ್ತಿಪಾತ್ರೆಗಳು ಹಾಗೂ ದಫನಗಳು ಕಂಡುಬಂದಿವೆ.[೧೦]

**ಆದಿಇತಿಹಾಸ ಕಾಲದ ನೆಲೆಗಳು**

ರೋಣ ತಾಲೂಕಿನಲ್ಲಿ ಒಟ್ಟು ೬ ನೆಲೆಗಳು ಆದಿ ಇತಿಹಾಸ ಕಾಲಕ್ಕೆ ಸಂಬಂಧಿಸಿದ್ದು, ಈ ಹಂತದ ಅವಶೇಷಗಳು ಕಂಡುಬಂದಿದೆ.[೧೧] ಮೇಲಿನ ವಿವರಗಳಿಂದ ರೋಣ ತಾಲೂಕು ಗದಗ ಜಿಲ್ಲೆಯಲ್ಲಿಯೇ ಅಲ್ಲದೇ ಕರ್ನಾಟಕದಲ್ಲಿ ಕಂಡುಬರುವ ಪ್ರಮುಖ ಪ್ರಾಗಿತಿಹಾಸ ನೆಲೆಗಳಲ್ಲಿ ಒಂದಾಗಿದೆ. ಈ ಪ್ರದೇಶದಲ್ಲಿ ಉತ್ಖನನದ ಅವಶ್ಯಕತೆಯಿದ್ದು ಉತ್ಖನನದಿಂದ ಇನ್ನು ಹಲವು ವಿಶೇಷಾಂಶಗಳು ದೊರೆಯಬಹುದು.

## ಪ್ರಾಚೀನತೆ

ಯಾವುದೇ ಒಂದು ಪ್ರದೇಶದ ಪ್ರಾಚೀನತೆಯನ್ನು ಅಲ್ಲಿನ ಪ್ರಾಕ್ತನಾಧಾರ, ಸಾಹಿತ್ಯಿಕ ಆಧಾರ ಮತ್ತು ಮೌಖಿಕ ಆಧಾರಗಳ ಹಿನ್ನೆಲೆಯಲ್ಲಿ ನಿರ್ಧರಿಸಲಾಗುತ್ತದೆ. ಅಂದರೆ ಈ ಎಲ್ಲ ಅಂಶಗಳು ಆ ಪ್ರದೇಶದ ಪ್ರಾಚೀನತೆಯನ್ನು ಗುರುತಿಸುವಲ್ಲಿ ಪರೋಕ್ಷವಾಗಿ ನೆರವಾಗುತ್ತವೆ.

ಪ್ರಸ್ತುತ ಅಧ್ಯಯನದ ವಿಷಯ ವ್ಯಾಪ್ತಿಗೆ ಒಳಪಡುವ ರೋಣ ಪ್ರದೇಶದ ಪ್ರಾಚೀನತೆಯನ್ನು ತಿಳಿಯಲು ಇಲ್ಲಿನ ಪ್ರಾಕ್ತನಾಧಾರಗಳು ಮತ್ತು ಮೌಖಿಕ ಆಧಾರಗಳು ನಮಗೆ ಸಹಾಯಕವಾಗಿವೆ. ಮೌಖಿಕ ಆಧಾರಗಳ ಹಿನ್ನೆಲೆಯಲ್ಲಿ ಈ ಪ್ರದೇಶದ ಪ್ರಾಚೀನತೆಯನ್ನು ತಿಳಿಯ ಹೊರಟರೆ ಅದು ನಮ್ಮನ್ನು ಪೌರಾಣಿಕ ಕಾಲಘಟ್ಟಕ್ಕೆ ಎಳೆದೊಯ್ಯುತ್ತದೆ. ಇಲ್ಲಿನ ಸ್ಥಳೀಯರ ಹೇಳಿಕೆಯ ಪ್ರಕಾರ 'ರೋಣ' ಎಂಬ ಹೆಸರು 'ದ್ರೋಣ' ಎಂಬ ಪದದಿಂದ ಬಂದುದುದಾಗಿದೆ. ಇಲ್ಲಿ ದ್ರೋಣಾಚಾರ್ಯರು ಇದ್ದರೆಂದೂ ಈ ಕಾರಣಕ್ಕಾಗಿ 'ದ್ರೋಣಪುರ' ಎಂಬ ಹೆಸರಿತ್ತೆಂದು, ಅದು ಕಾಲಕ್ರಮೇಣ 'ರೋಣ' ಎಂಬ ಪದ ನಿಷ್ಪತ್ತಿ ಹೊಂದಿತೆಂದು ಅವರು ಹೇಳುತ್ತಾರೆ. ಅಲ್ಲದೇ ಇದಕ್ಕೆ ಸಾಕ್ಷಿಯಾಗಿ ಇಲ್ಲಿಯ ಬಸವನ ದೇವಾಲಯ (ದ್ರೋಣಾಚಾರ್ಯರ ಗುಡಿ)ದಲ್ಲಿರುವ ಶಿಲ್ಪವನ್ನು ದ್ರೋಣರ ಶಿಲ್ಪವೆಂದು ಐತಿಹ್ಯಕ್ಕೆ ಪೂರಕವಾಗಿ ಬಳಸಿಕೊಳ್ಳುತ್ತಾರೆ.

ಶಾಸನಗಳಲ್ಲಿ 'ದ್ರೋಣಪುರ' ಎಂಬ ಉಲ್ಲೇಖ ದೊರೆಯದೇ ಹೋದರೂ ಕೆಲವು ಪ್ರಾಚೀನ ಶಾಸನಗಳಲ್ಲಿ 'ದ್ರೋಣ' ಎಂದು ಕಾಣಿಸಿಕೊಂಡಿದೆ. ಕ್ರಿ.ಶ. ೭ನೇ ಶತಮಾನದ ಬಾದಾಮಿ ಶಾಸನಗಳಲ್ಲಿ 'ಕಲ್ಕುಟಿ ಶ್ರೀ ದ್ರೋಣಸ್ವಾಮಿ', 'ದ್ರೋಣಮ್ಮ', 'ಶ್ರೀ ದ್ರೋಣಮ್ಮಗೊಟ್ಟಗ', 'ಶ್ರೀ ದ್ರೋಣ', 'ದೋಣನ್ ' ಎಂಬ ಹಾಗೂ ಲಕ್ಷ್ಮೇಶ್ವರದ ಶಾಸನಗಳಲ್ಲಿ (೧೦೮೧) 'ದ್ರೋಣ' ಎಂಬ ಪುರುಷವಾಚಿ ನಾಮಪದಗಳು ಉಲ್ಲೇಖಗೊಂಡರೆ ಮುಂಡರಗಿ ತಾಲೂಕಿನ ಡೋಣಿಯ ಶಾಸನಗಳಲ್ಲಿ 'ದ್ರೋಣಿಕಾ', 'ದ್ರೋಣಿ', 'ದೋಣಿ' ಎಂಬ ಸ್ತ್ರೀವಾಚಿ ಪದಗಳು ಕಂಡುಬರುತ್ತವೆ. ಅಲ್ಲದೆ ಈ ಡೋಣಿ ಗ್ರಾಮವನ್ನು 'ದ್ರೋಣಿಕಾಗ್ರಾಮ', 'ದ್ರೋಣಿಪುರ', 'ದೋಣಿ' ಎಂದು ಕರೆದಿವೆ. ರೋಣದ ದ್ರೋಣಾಚಾರ್ಯ ದೇವಾಲಯದ ಬಲಗಡೆಯ ಶಾಸನವೊಂದು ದೋಣಿರೆಯ ಕುಲ(ಕಮಲಾರ್ಕ್ಕ ದೇಚಿ)ವು ಐಂದ್ರೋತ್ಸವದ ಪೂಜೆ ಮಾಡಿಸಿ ಸರಸ್ವತಿಯ ಭೋಜನಕ್ಕೆ ದತ್ತಿ ನೀಡಿದ ಬಗ್ಗೆ ಉಲ್ಲೇಖಿಸಿದೆ. ಇಲ್ಲಿ ದೋಣಿರೆ ಕುಲದ ಪ್ರಸ್ತಾಪ ಮಾತ್ರ ಬಂದಿದೆ.

ಇವೆಲ್ಲವುಗಳಿಂದ 'ದ್ರೋಣಿ' ಅಥವಾ 'ದ್ರೋಣಿಕಾ' ಎಂಬ ಸ್ತ್ರೀವಾಚಿ ಪದದಿಂದ ದ್ರೋಣಿಕಾಪುರ - ದ್ರೋಣಿಪುರ-ದೋಣಿ ಎಂದಾಗಿ ಅದು ಮುಂದೆ 'ಡೋಣಿ' ಎಂದಾಗಿರುವುದು ತಿಳಿದುಬರುತ್ತದೆ. ಹೀಗೆ ದ್ರೋಣಿ ಎಂಬ ಸನ್ಯಾಸಿನಿಯ ಹೆಸರಿನಿಂದ ಡೋಣಿ ಗ್ರಾಮವನ್ನು 'ದ್ರೋಣಿಕಾಪುರ', 'ದ್ರೋಣಿಗ್ರಾಮ' ಎಂದು ಕರೆದಂತೆ ರೋಣ ಗ್ರಾಮವನ್ನು 'ದ್ರೋಣಪುರ' ಎಂದು ಕರೆದಿರುವ ಸಂಭವವಿದೆ[೧೨] ಎಂಬುದು ಸ್ಥಳೀಯರ ಹೇಳಿಕೆಗೆ ಪೂರಕವಾಗಿಸಿದೆ ಎಂದು ಹೇಳಬಹುದು.

ಶಾಸನಾಧಾರಗಳ ಸಾಹಿತ್ಯಕ ಹಿನ್ನೆಲೆಯಲ್ಲಿ ರೋಣ ತಾಲೂಕಿನ ಪ್ರಾಚೀನತೆಯನ್ನು ಶೋಧಿಸ ಹೊರಟರೆ ಒದಗುವ ಮಾಹಿತಿಯೆಂದರೆ, ಐತಿಹಾಸಿಕ ಕಾಲಘಟ್ಟದಲ್ಲಿ ಆಳಿದ ಹಲವು ಅರಸು ಮನೆತನಗಳ ಆಳ್ವಿಕೆಯಲ್ಲಿ ಈ ಪ್ರದೇಶವೂ ಒಳಪಟ್ಟಿದ್ದು ಪ್ರಮುಖ ಆಡಳಿತ ಕೇಂದ್ರವು ಆಗಿತ್ತು. ರೋಣ ತಾಲೂಕಿನಲ್ಲಿರುವ ೩೦ ಗ್ರಾಮಗಳಲ್ಲಿ ಇದುವರೆಗೂ ಒಟ್ಟು, ೧೮೯ಕ್ಕೂ ಅಧಿಕ ಶಾಸನಗಳು ದೊರಕಿದ್ದು, ಅವು ಇಲ್ಲಿನ ಇತಿಹಾಸವನ್ನು ತಿಳಿಯಲು ಸಹಾಯಕವಾಗಿದೆ. ಬೆಳ್ವಲ-೩೦೦, ಪುಲಿಗೆರೆ-೩೦೦, ಬೆಳ್ವಣಿಕೆ-೧೨, ನೆರೆಯಂಗಲ್ -೧೨, ಕಿಸುಕಾಡು-೭೦ ಈ ಆಡಳಿತ ವಿಭಾಗಗಳ ಮೂಲಕ ಹಲವು ಅರಸು ಮನೆತನಗಳು ಇಲ್ಲಿ ಆಳ್ವಿಕೆ ನಡೆಸಿದ್ದರೆಂಬುದು ಶಾಸನಾಧಾರಗಳಿಂದ ದೃಢಪಟ್ಟಿದೆ.

ಭಾರತದ ಇತಿಹಾಸ ಆರಂಭಗೊಳ್ಳುವುದು ಮೌರ್ಯರ ಕಾಲದಿಂದ. ಇವರು ಭಾರತದ ಉತ್ತರ ಭಾಗದಲ್ಲಿ ಆಳ್ವಿಕೆ ನಡೆಸಿದರೂ, ದಕ್ಷಿಣದವರೆಗೂ ಇವರ ಸಾಮ್ರಾಜ್ಯ ಹರಡಿತ್ತೆಂಬುದು ತಿಳಿಯಬಹುದು. ಕರ್ನಾಟಕದಲ್ಲಿ ಇವರ ಹಲವು ಪ್ರಮುಖ ಶಾಸನಗಳು ದೊರೆತಿವೆ. ಪ್ರಸ್ತುತ ಅಧ್ಯಯನ ವಿಷಯದ ರೋಣ ತಾಲೂಕು ಪ್ರದೇಶಗಳಲ್ಲಿ ಇವರ ಕಾಲದ ಯಾವುದೇ ಶಾಸನಗಳಾಗಲೀ ಸ್ಮಾರಕಗಳಾಗಲೀ ದೊರೆಯುವುದಿಲ್ಲ. ಆದರೂ, ಈ ತಾಲೂಕಿನ ಜಿಲ್ಲಾ ಕೇಂದ್ರವಾದ ಗದಗನ್ನು ಅಂಟಿಕೊಂಡಂತೆ ಅದರ ಪೂರ್ವಕ್ಕಿರುವ ಕೊಪ್ಪಳ ಜಿಲ್ಲೆ ಮತ್ತು ದಕ್ಷಿಣಕ್ಕಿರುವ ಬಳ್ಳಾರಿ ಜಿಲ್ಲೆಗಳಲ್ಲಿ ಅಶೋಕನ ಶಾಸನಗಳು ಲಭ್ಯವಾಗಿರುವುದರಿಂದ ಈ ಪ್ರದೇಶವೂ ಸಹ ಮೌರ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಬಹುದು.[೧೩] ಹಾಗೆಯೇ, ಇವರ ನಂತರ ಆಳ್ವಿಕೆ ಮಾಡಿದ ಶಾತವಾಹನರ ಆಡಳಿತದ ಕುರುಹುಗಳು ಇಲ್ಲಿ ದೊರೆಯದೆ ಹೋದರೂ, ರೋಣ ತಾಲೂಕಿನ ಪಕ್ಕದ ತಾಲೂಕು ಪ್ರದೇಶವಾದ ನರಗುಂದದಲ್ಲಿ ಇವರ ಆಡಳಿತ ಇತ್ತು ಎಂಬುದಕ್ಕೆ ಸ್ಪಷ್ಟ ಆಧಾರಗಳು ದೊರಕಿವೆ. ಈ ತಾಲೂಕಿನ ವಾಸನ ಎಂಬ ಗ್ರಾಮದಲ್ಲಿ ಕ್ರಿ.ಶ.ಸುಮಾರು ೩ನೇ ಶತಮಾನದ ಪೂರ್ವಾರ್ಧದ ಶಾತವಾಹನ ದೊರೆ ವಾಸಿಷ್ಠ ಪುತ್ರ ಶ್ರೀ ಪುಳಮಾವಿಯ ಒಂದು ಪ್ರಾಕೃತ ಶಾಸನ ದೊರಕಿದೆ.

ಪ್ರಸ್ತುತ ಶಾಸನವು ಮಹಾದೇವ ಚಂಡಶಿವ ದೇವಾಯತನ ಹಾಗೂ ಶಿಲ್ಪಿಯನ್ನು ಉಲ್ಲೇಖಿಸುತ್ತದೆ. ಇದು ಕರ್ನಾಟಕದಲ್ಲಿ ಇದುವರೆಗೂ ತಿಳಿದು ಬಂದಿರುವ ಅತಿ ಪ್ರಾಚೀನ ಶೈವ ದೇವಾಲಯ ಎಂಬುದರಲ್ಲಿ ಸಂದೇಹವಿಲ್ಲ.[೧೪] ಆದ್ದರಿಂದ ನರಗುಂದದ ನೆರೆಯ ತಾಲೂಕಾದ ರೋಣದಲ್ಲಿಯೂ ಕೂಡ ಇವರ ಆಳ್ವಿಕೆ ವಿಸ್ತರಿಸಿದ್ದಿತು ಎಂದು ಊಹಿಸಬಹುದಾಗಿದೆ. ಕನ್ನಡದ ಮೊದಲ ರಾಜವಂಶವೆಂಬ ಖ್ಯಾತಿ ಪಡೆದ ಬನವಾಸಿ ಕದಂಬರ ಆಳ್ವಿಕೆಗೆ ಈ ಪ್ರದೇಶವು ಒಳಪಟ್ಟಿದ್ದರೂ ಅವರ ಕಾಲದ ಯಾವುದೇ ಸ್ಪಷ್ಟ ಕುರುಹುಗಳು ದೊರಕಿಲ್ಲ. ಇವರ ನಂತರ ಆಳ್ವಿಕೆಗೆ ಬಂದ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಲ್ಯಾಣದ ಕಲಚೂರಿಗಳು, ದೇವಗಿರಿಯ ಯಾದವರು, ಯಲಬುರ್ಗಿಯ ಸಿಂಧರು, ಹೊಯ್ಸಳರು ಹಾಗೂ ವಿಜಯನಗರ ಅರಸರು ಇವರೆಲ್ಲರು ಇಲ್ಲಿ ಆಳ್ವಿಕೆ ನಡೆಸಿದ್ದರೆಂಬುದಕ್ಕೆ ನೂರಾರು ಶಾಸನಗಳು ಸಾಕ್ಷಿಯಾಗಿವೆ.

## ಬಾದಾಮಿ ಚಾಲುಕ್ಯರು

ಕ್ರಿ.ಶ.೫೦೦ ರಿಂದ ೭೫೭ರವರೆಗೆ ಆಳಿದ ಬಾದಾಮಿ ಚಾಲುಕ್ಯರು ಕರ್ನಾಟಕದಲ್ಲಿ ಒಂದು ಉಜ್ವಲ ಯುಗವನ್ನು ಆರಂಭಿಸಿದರು ರಾಜಕೀಯ ಹಾಗೂ ಕಲೆ ಅದರಲ್ಲಿಯೂ ವಾಸ್ತುಶಿಲ್ಪದ ದೃಷ್ಟಿಯಿಂದ ಈ ಯುಗವನ್ನು ಕರ್ನಾಟಕಕ್ಕೆ ವಿಶ್ವ ಕಲಾ ಪರಂಪರೆಯ ಪಟ್ಟಿಯಲ್ಲಿ ಪ್ರಮುಖ ಸ್ಥಾನವನ್ನು ಗಿಟ್ಟಿಸಿಕೊಟ್ಟಿದೆ. ಬಾದಾಮಿ, ಐಹೊಳೆ, ಪಟ್ಟದಕಲ್ಲು, ಮಹಾಕೂಟಗಳಲ್ಲಿ ಸ್ಥಾಪಿತವಾದ ಇವರ ದೇವಾಲಯಗಳು ಇಂದಿಗೂ ವಿಶ್ವ ಪ್ರಸಿದ್ಧಿಯನ್ನು ಹೊಂದಿದೆಯಲ್ಲದೆ ಐತಿಹಾಸಿಕ ಪ್ರಸಿದ್ಧ ಪ್ರೇಕ್ಷಣೀಯ ಸ್ಥಳಗಳಾಗಿವೆ. ಕೇವಲ ಕರ್ನಾಟಕದಲ್ಲಿ ಅಲ್ಲದೆ ಆಂಧ್ರದ ಆಲಂಪುರದಲ್ಲಿಯೂ ಇವರ ವಾಸ್ತು ರಚನೆಯ ವೈಶಿಷ್ಟ್ಯವನ್ನು ಕಾಣಬಹುದು. ಹೀಗೆ ಕಲಾ ಕ್ಷೇತ್ರದ ಐತಿಹಾಸಿಕ ಪುಟಗಳಲ್ಲಿ ಚಿರಸ್ಮರಣೀಯ ಚಾಪನ್ನು ಒತ್ತಿದ ಬಾದಾಮಿ ಚಾಲುಕ್ಯರ ಕಾಲವು ರಾಜಕೀಯ ಕ್ಷೇತ್ರದಲ್ಲಿಯೂ ತನ್ನ ನಿಶಾನೆಯನ್ನು ಮೂಡಿಸಿದೆ. ಉತ್ತರ ಭಾರತದವರೆಗೂ ಸಾಮ್ರಾಜ್ಯವನ್ನು ವಿಸ್ತರಿಸಿದ ದಕ್ಷಿಣದ ಮೊದಲ ಅರಸುಮನೆತನ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

ಪ್ರಸ್ತುತ ರೋಣ ಪ್ರದೇಶವು ಇವರ ಆಡಳಿತದ ಆಳ್ವಿಕೆಗೆ ಒಳಪಟ್ಟಿತೆಂಬುದು ಈ ತಾಲೂಕಿನ ಜಕ್ಕಲಿ ಗ್ರಾಮದಲ್ಲಿ ದೊರೆತ ಶಾಸನ[೧೫]ದಿಂದ ದೃಢಪಟ್ಟಿದೆ. ಚಾಲುಕ್ಯ ಅರಸ ವಿಜಯಾದಿತ್ಯನ ಹಾಗೂ ಜಕ್ಕಲಿ ಗ್ರಾಮದ ಉಲ್ಲೇಖಗಳು ಈ ಶಾಸನದಲ್ಲಿ ಕಂಡುಬರುತ್ತವೆ. ರೋಣ ತಾಲೂಕಿನ ಕಾಲಕಾಲೇಶ್ವರ ಗುಡ್ಡ ಅಥವಾ ಕಳಕಪ್ಪನಗುಡ್ಡದ ದೇವಾಲಯದ ಎದುರಿನ ಬಂಡೆಯಲ್ಲಿ ಇತ್ತೀಚೆಗೆ ಅಪ್ರಕಟಿತ ಶಾಸನ ದೊರೆತಿದ್ದು, ಅದರಲ್ಲಿನ "ಶ್ರೀ

ಭಾಪರಾಸಿಭಟರರೂ"ಎಂಬ ಉಲ್ಲೇಖದಲ್ಲಿನ ಅಕ್ಷರಗಳು ಬಾದಾಮಿ ಚಾಲುಕ್ಯ ಕಾಲದ ಲಿಪಿಯಾಗಿದ್ದು, ಇದನ್ನು ೬ನೇ ಶತಮಾನಕ್ಕೆ ಸೇರಿಸಬಹುದಾಗಿದೆ. ಕಾಲದ ದೃಷ್ಟಿಯಿಂದ ಈ ಶಾಸನ ಗದಗ ಪ್ರದೇಶದಲ್ಲಿ ಬಾದಾಮಿ ಚಾಲುಕ್ಯರ ಪ್ರಾಚೀನ ಶಾಸನವಾಗಿದೆ.[೧೬] ಅಲ್ಲದೆ ಇವರ ರಾಜ್ಯದ ರಾಜಧಾನಿಯಾದ ಬಾದಾಮಿಯು ರೋಣದಿಂದ ಕೇವಲ ೨೮ ಕಿ.ಮೀ. ದೂರದಲ್ಲಿದೆ. ಆದ್ದರಿಂದ ರಾಜಧಾನಿಗೆ ಹತ್ತಿರವಾದ ಈ ಪ್ರದೇಶದಲ್ಲಿ ಅವರ ಪ್ರಭಾವ ಹೆಚ್ಚಿತ್ತೆಂದು ಹೇಳಬಹುದು. ಆದರೆ ಈ ತಾಲೂಕಿನಲ್ಲಿ ಅವರ ಯಾವುದೇ ಸ್ಮಾರಕಗಳು ಕಂಡುಬಂದಿಲ್ಲ.

## ರಾಷ್ಟ್ರಕೂಟರು

ಬಾದಾಮಿ ಚಾಲುಕ್ಯರ ಅವಸಾನದ ನಂತರ ರಾಷ್ಟ್ರಕೂಟರು ಅಸ್ತಿತ್ವಕ್ಕೆ ಬಂದುದು ಶಾಸನಗಳು ತಿಳಿಸುತ್ತವೆ. ರೋಣದಲ್ಲಿ ಇವರ ಕಾಲದ ಒಟ್ಟು ೮ ಶಾಸನಗಳು[೧೭] ದೊರಕಿವೆ. ಅವು ಕರಮಡಿ(೧), ಕೌಜಗೇರಿ(೨), ನರೆಗಲ್ಲ(೧), ರೋಣ(೨), ಸವಡಿ(೧), ಸೂಡಿ(೧)ಗಳಲ್ಲಿ ದೊರಕಿದ್ದು, ಒಂದನೇ ಅಮೋಘವರ್ಷ, ಎರಡನೇ ಕೃಷ್ಣ, ಮೂರನೇ ಕೃಷ್ಣ, ನಾಲ್ಕನೇ ಗೋವಿಂದ ಮತ್ತು ಖೊಟ್ಟಿಗನ ಕಾಲಕ್ಕೆ ಸೇರಿದವುಗಳಾಗಿವೆ. ಹಾಗೆಯೇ ಇತ್ತೀಚೆಗೆ ರೋಣದಲ್ಲಿ ಇವರ ಕಾಲಕ್ಕೆ ಸೇರುತ್ತದೆನ್ನಲಾದ ಅಪ್ರಕಟಿತ ವೀರಗಲ್ಲು ಶಾಸನವೊಂದು ದೊರಕಿದೆ.[೧೮] ರಾಜರೂ, ರೋಣ, ಸವಡಿ, ಸೂಡಿಗಳಲ್ಲಿ ಇವರ ಕಾಲದ ದೇವಾಲಯಗಳು ಕಂಡುಬಂದಿವೆ.

ಕರಮಡಿಯಲ್ಲಿ ದೊರೆತ ಶಾಸನ[೧೯] ಒಂದನೇ ಅಮೋಘವರ್ಷನ ಕಾಲಕ್ಕೆ ಸೇರಿದ್ದು, ತ್ರುಟಿತವಾಗಿರುವುದರಿಂದ ಹೆಚ್ಚಿನ ಮಾಹಿತಿ ಒದಗುವುದಿಲ್ಲ. ಕೌಜಗೇರಿಯಲ್ಲಿ ದೊರೆತ ೨ ಶಾಸನಗಳು[೨೦] ಎರಡನೇ ಕೃಷ್ಣ ಮತ್ತು ನಾಲ್ಕನೇ ಗೋವಿಂದನಿಗೆ ಸೇರಿದವುಗಳಾಗಿದ್ದು, ಕ್ರಮವಾಗಿ ಬೆಳ್ವಣಿಕೆ-೧೨ ಉಲ್ಲೇಖ ಹಾಗೂ ದೇವಾಲಯಗಳಿಗೆ ನೀಡಿದ ವಿವಿಧ ದಾನಗಳ ಬಗೆಗೆ ವಿವರಿಸುತ್ತವೆ. ನರೆಗಲ್ಲದಲ್ಲಿ ದೊರೆತ ಇವರ ಶಾಸನವು[೨೧] ೩ನೇ ಕೃಷ್ಣನಿಗೆ ಸೇರಿದ್ದು, ಪದ್ಮಬ್ಬರಸಿಯಿಂದ ಜೈನ ಬಸದಿಯ ನಿರ್ಮಾಣ ಮತ್ತು ದಾನದ ಉಲ್ಲೇಖ ಹೊಂದಿದೆ. ರೋಣದಲ್ಲಿ ದೊರೆತ ಶಾಸನಗಳು ಒಂದನೇ ಅಮೋಘವರ್ಷ ಹಾಗೂ ಮೂರನೇ ಕೃಷ್ಣನ ಕಾಲಕ್ಕೆ ಸೇರಿದವುಗಳಾಗಿವೆ. ಒಂದನೇ ಅಮೋಘವರ್ಷನ ಶಾಸನವು[೨೨] ಬಲ್ಲವರಸರಿಂದ ರೋಣದ ಮಹಾಜನರಿಗೆ ತುಪ್ಪದ ಸುಂಕ ದಾನ ನೀಡಿದ ವಿಷಯ ಪ್ರಸ್ತಾಪಿಸಿದರೆ, ಮೂರನೇ ಕೃಷ್ಣನಿಗೆ ಸೇರಿದ ಶಾಸನವು[೨೩] ಯುದ್ಧದಲ್ಲಿ ಪಂಪಯ್ಯನು ವೀರಮರಣ ಹೊಂದಿದುದನ್ನು ತಿಳಿಸುತ್ತದೆ. ಈ ಮೇಲೆ ತಿಳಿಸಿದಂತೆ ರೋಣದಲ್ಲಿ ಇತ್ತೀಚೆಗೆ ಇವರ ಕಾಲದ ಒಂದು

ಅಪ್ರಕಟಿತ ವೀರಗಲ್ಲು ಶಾಸನ ಲಭ್ಯವಾಗಿದ್ದು, ಇದು ರಾಷ್ಟ್ರಕೂಟ ದೊರೆ ಖೊಟ್ಟಿಗನ ನಂತರ ಇವನ ಮಗ ೪ನೇ ಕನ್ನರನನ್ನಬಹುದಾದ ಅರಸನು ಆಳಿದನೆಂದು ತಿಳಿಸುತ್ತದೆ. ಈ ಶಾಸನದಿಂದ ಲಭ್ಯವಾದ ಬಹುಮುಖ್ಯ ವಿಷಯವೆಂದರೆ ರಾಷ್ಟ್ರಕೂಟ ಸಾಮ್ರಾಜ್ಯ ಕ್ರಿ.ಶ.೯೭೩ರಲ್ಲಿ ಎರಡನೇ ಕರ್ಕನ ಅವಧಿಯಲ್ಲಿ ಕೊನೆಗೊಳ್ಳದೆ ನಾಲ್ಕನೇ ಕನ್ನರನಿಂದ ಕೊನೆಗೊಂಡಿರಬಹುದು ಎಂಬುದು. ಅಲ್ಲದೇ ರಾಷ್ಟ್ರಕೂಟರ ಆಳ್ವಿಕೆ ಕ್ರಿ.ಶ.೯೭೭ರವರೆಗೂ ಅಸ್ತಿತ್ವದಲ್ಲಿ ಇದ್ದಿತು ಎಂದು ತಿಳಿದು ಬರುತ್ತದೆ. ರಾಷ್ಟ್ರಕೂಟ ಅವಧಿಯ ಉತ್ತಮ ಸಾಹಿತ್ಯದ ವೀರಗಲ್ಲು ಎಂಬ ಕೀರ್ತಿ ಶಾಸನಕ್ಕೆ ಸಲ್ಲುತ್ತದೆ. ಸವಡಿಯಲ್ಲಿ ದೊರೆತ ಖೊಟ್ಟಿಗನ ಶಾಸನವು[೨೪] ತ್ರುಟಿತಗೊಂಡಿದ್ದು ದೇವಾಲಯ ಮತ್ತು ಮಂಟಪಗಳ ರಚನೆ ಹಾಗೂ ಬೆಂಗಿಯ ಗರ್ದುಗರಯ್ಯನ ವರ್ಣನೆ ಹೊಂದಿದೆ. ಸೂಡಿಯಲ್ಲಿ ಯಾವ ಅರಸನಿಗೆ ಸಂಬಂಧಿಸಿದೆ ಎಂದು ತಿಳಿಯದ ಇವರ ಕಾಲದ ಶಾಸನವು ಮೂರ್ತಿ ಶಿವಾಚಾರ್ಯ ಹಾಗೂ ೨೦ ಮಹಾಜನರ ಸನ್ನಿಧಿಯಲ್ಲಿ ಪುಲಿಗೆರೆಯ ಬದ್ದೆಗೆ ಬ್ರಹ್ಮಪುರಿ ಎಂದು ನಾಮಕರಣ ಮಾಡಿದ್ದ ಉಲ್ಲೇಖವನ್ನು ಹೊಂದಿದೆ.[೨೫]

ಈ ಮೇಲಿನ ಶಾಸನಗಳಲ್ಲದೇ ಹಲವು ದೇವಾಲಯಗಳು ಇಲ್ಲಿ ನಿರ್ಮಾಣಗೊಂಡಿದ್ದು, ಅದರಲ್ಲೂ ರೋಣದಲ್ಲಿ ಉಳಿದ ಗ್ರಾಮಗಳಿಗಿಂತ ಹೆಚ್ಚು ಪ್ರಮಾಣದಲ್ಲಿ ಕಂಡುಬರುತ್ತಿದ್ದು ರಾಷ್ಟ್ರಕೂಟರ ಇತಿಹಾಸ ತಿಳಿಯುವಲ್ಲಿ ಬೆಳಕು ಚೆಲ್ಲುತ್ತದೆ.

### ಕಲ್ಯಾಣದ ಚಾಲುಕ್ಯರು

ರೋಣ ತಾಲೂಕಿನಲ್ಲಿ ಹೆಚ್ಚು ಪ್ರಭಾವ ಕಂಡುಬರುವುದು ಕಲ್ಯಾಣ ಚಾಲುಕ್ಯರದ್ದು, ಶಾಸನ ದೃಷ್ಟಿಯಿಂದಲೂ ಹೌದು; ದೇವಾಲಯಗಳ ದೃಷ್ಟಿಯಿಂದಲೂ ಹೌದು. ಶಾಸನಗಳ ಸಂಖ್ಯಾದೃಷ್ಟಿಯಿಂದ ಅತಿ ಹೆಚ್ಚು ಶಾಸನಗಳನ್ನು ಬರೆಯಿಸಿದ ಕೀರ್ತಿ ಈ ಮನೆತನಕ್ಕೆ ಸಲ್ಲುತ್ತದೆ. ರೋಣ ತಾಲೂಕಿನ ಅಬ್ಬಿಗೇರಿ, ಇಟಗಿ, ಊಣಚಗೇರಿ, ಉರಿಬ್ಯಾಲೇರಿ, ಕರಮಡಿ ಕಾಲಕಾಲೇಶ್ವರ, ಕುರಹಟ್ಟಿ, ಕುಂಟೋಜಿ, ಕೋಡಿಕೊಪ್ಪ, ಜಕ್ಕಲಿ, ತೊಟಗಂಟಿ, ನರೇಗಲ್ಲ, ನಿಡಗುಂದಿ, ಮಣಸಗಿ, ಮಲ್ಲಾಪುರ, ಯಾವಗಲ್, ರಾಜೂರ, ರೋಣ, ಸವಡಿ, ಸೂಡಿ, ಹನಮನಹಾಳ, ಹಿರೇಹಾಳ್, ಹುನಗುಂದಿ ಈ ಎಲ್ಲ ಗ್ರಾಮಗಳಲ್ಲಿ ಕೆಲವು ಗ್ರಾಮಗಳು ಶಾಸನಸಹಿತ ದೇವಾಲಗಳ ಕುರುಹುಗಳನ್ನು ಹೊಂದಿದ್ದು, ಇನ್ನೂ ಕೆಲವು ಗ್ರಾಮಗಳು ಕೇವಲ ಶಾಸನಗಳು ಮತ್ತು ಇತರ ಪ್ರಾಚ್ಯಾವಶೇಷಗಳನ್ನು ಮಾತ್ರ ಒಳಗೊಂಡಿವೆ. ೪೮ ಕ್ಕೂ ಮೀರಿದ ಶಾಸನಗಳು ಕೇವಲ ರೋಣ ತಾಲೂಕಿನಲ್ಲಿಯೇ ದೊರೆಯುತ್ತವೆ. ಈ ಶಾಸನಗಳು ಐದನೇ ವಿಕ್ರಮಾದಿತ್ಯ, ಎರಡನೇ ಜಯಸಿಂಹ, ಒಂದನೇ ಸೋಮೇಶ್ವರ,

ಎರಡನೇ ಸೋಮೇಶ್ವರ, ಆರನೇ ವಿಕ್ರಮಾದಿತ್ಯ, ಮೂರನೇ ಸೋಮೇಶ್ವರ ಎರಡನೇ ಜಗದೇಕಮಲ್ಲ, ಮೂರನೇ ತೈಲ, ನಾಲ್ಕನೇ ಸೋಮೇಶ್ವರರಿಗೆ ಸಂಬಂಧಿಸಿದ ಶಾಸನಗಳಾಗಿವೆ.[೨೬] ಇದರಲ್ಲಿಯ ಹಲವು ಶಾಸನಗಳು ಭೂದಾನ, ಸುವರ್ಣದಾನ, ಹಣದಾನ, ಗ್ರಾಮದಾನ, ದತ್ತಿ ಶಾಸನಗಳಾಗಿವೆ. ಇತ್ತಿಚೇನ ಸಂಶೋಧನೆಯ ಪ್ರಕಾರ ರೋಣದಲ್ಲಿ ದೊರೆತ ಅಪ್ರಕಟಿತ ಶಾಸನಮೊಂದು ಎರಡನೇ ತೈಲಪ ಕ್ರಿ.ಶ.೯೭೭ರಲ್ಲಿ ನಾಲ್ಕನೇ ಕನ್ನರನನ್ನು ಸೋಲಿಸಿ ಚಾಲುಕ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದನೆಂದು ತಿಳಿಸುತ್ತದೆ.[೨೭]

**ಕಲಚೂರಿಗಳು**

ಕಲಚೂರಿಗಳು ಆರಂಭದಲ್ಲಿ ಕಲ್ಯಾಣ ಚಾಲುಕ್ಯರ ಮಾಂಡಲೀಕರಾಗಿ ಕಲ್ಯಾಣದಲ್ಲಿಯೇ ಕ್ರಿ.ಶ.೧೧೬೨ರಲ್ಲಿ ಸ್ವಾತಂತ್ರ ದೊರೆಗಳೆಂದು ಘೋಷಿಸಿಕೊಂಡರು. ಕಲಚೂರಿಗಳು ಮಧ್ಯಭಾರತದ ಕಲಚೂರಿ ಮನೆತನಕ್ಕೆ ಸೇರಿದ ಹೈಹಯ ಕುಲಕ್ಕೆ ಸೇರಿದವರು. ಇವರ ಮೊದಲ ಉಲ್ಲೇಖವು ನೆರೂರು ತಾಮ್ರಶಾಸನಗಳಲ್ಲಿಯೂ ಹಾಗೂ ಮಂಗಳೇಶನ ಕ್ರಿ.ಶ.೬೦೨ರ ಮಹಾಕೂಟ ಶಿಲಾಶಾಸನದಲ್ಲಿಯೂ, ಕ್ರಿ.ಶ.೬೩೪ರ ೨ನೇ ಪುಲಿಕೇಶಿಯ ಐಹೊಳೆ ಪ್ರಶಸ್ತಿ ಶಾಸನದಲ್ಲಿಯೂ ಕಂಡುಬರುತ್ತದೆ.[೨೮]ಇವರ ಒಟ್ಟು ೬ನೇ ಶಾಸನಗಳು[೨೯] ರೋಣ ತಾಲೂಕಿನ ಅಬ್ಬಿಗೇರಿ, ನರೇಗಲ್ಲ, ನಿಡಗುಂದಿ, ರೋಣ, ಸೂಡಿ ಗ್ರಾಮಗಳಲ್ಲಿ ದೊರಕಿವೆ. ೨ ಶಾಸನಗಳು ರಾಯಮುರಾರಿ ಸೋವಿದೇವನಿಗೆ ಸೇರಿದ್ದು, ಆ ಉಳಿದ ಶಾಸನಗಳು ಸಂಕಮದೇವನಿಗೆ ಸೇರಿದುವಾಗಿವೆ. ಈ ಎಲ್ಲ ಶಾಸನಗಳು ದೇವಾಲಯಗಳಿಗೆ ನೀಡಿದ ಭೂದಾನ, ಸುವರ್ಣದಾನ, ಪುನರ್ ದತ್ತಿ ಹಾಗೂ ಸೂಡಿಯಲ್ಲಿ ದೊರೆತ ಶಾಸನ ಸಿಂದ ಅರಸರ ವಂಶಾವಳಿ ಹಾಗೂ ವರ್ಣನೆಯ ಮಾಹಿತಿಯನ್ನು ಒಳಗೊಂಡಿವೆ.

**ಯಾದವರು ಅಥವಾ ಸೇವುಣರು ಹಾಗೂ ಸಿಂಧರು**

ರೋಣ ತಾಲೂಕಿನ ಕಾಲಕಾಲೇಶ್ವರ, ಕೊಡಗಾನೂರ, ನರೇಗಲ್, ನಿಡಗುಂದಿ, ಯಾವಗಲ್ಲ, ಸೂಡಿಗಳಲ್ಲಿ ಯಾದವರ ಶಾಸನಗಳು[೩೦] ದೊರೆತಿವೆ. ಸಿಂಘಣ, ಕನ್ನರ ಮತ್ತು ಮಹಾದೇವ ಅರಸರಿಗೆ ಸಂಬಂಧಿಸಿದ ಈ ಶಾಸನಗಳು ಗ್ರಾಮಗಳ ಉಲ್ಲೇಖ, ದೇವಾಲಯಗಳಿಗೆ ನೀಡಿದ ಭೂದಾನ ಹಾಗೂ ದತ್ತಿಯ ವಿವರಗಳನ್ನು ಒಳಗೊಂಡಿವೆ. ಸೂಡಿಯಲ್ಲಿ ದೊರೆತ ಯಾದವ ಸಿಂಘಣನಿಗೆ ಸಂಬಂಧಿಸಿದ ಶಾಸನದಲ್ಲಿ ಕಿಸುಕಾಡು ೭೦ರಲ್ಲಿ ಸುಂಕ ವಿನಾಯಿತಿ ಮಾಡಿದ ಉಲ್ಲೇಖಗಳು ದೊರೆತಿವೆ.

ಸಿಂಧರು ಸಹ ರೋಣ ಪ್ರದೇಶವನ್ನು ಆಳುತ್ತಿದ್ದರೆನ್ನಲು ಅಬ್ಬಿಗೇರಿ, ಊಣಚಗೇರಿ, ನಿಡಗುಂದಿ, ಬೆಣಚಮಟ್ಟಿ, ಹಿರೇಮಣ್ಣೂರಗಳಲ್ಲಿ[೩೧] ದೊರೆತ ಅವರ ಶಾಸನಗಳೇ ಸಾಕ್ಷಿಯಾಗಿವೆ.

ಇವು ಸಿಂಧ ಅರಸ ಬಿಜ್ಜಳ, ಚಾವುಂಡರಸರಿಗೆ ಸಂಬಂಧಿಸಿದ ಶಾಸನಗಳಾಗಿದ್ದು, ಭೂದಾನದ ವಿವರಣೆಯನ್ನು ಒಳಗೊಂಡಿವೆ.

**ಹೊಯ್ಸಳರು ಹಾಗೂ ವಿಜಯನಗರದ ಅರಸರು**

ಹೊಯ್ಸಳರ ಶಾಸನಗಳು ರೋಣ ತಾಲೂಕಿನಲ್ಲಿ ಹೆಚ್ಚು ದೊರೆಯದೇ ಹೋದರೂ ನರೆಗಲ್‌ನಲ್ಲಿ ೨ನೇ ವೀರಬಲ್ಲಾಳನ ಶಾಸನವೊಂದು[೨] ದೊರೆತಿದ್ದು, ಅವರ ಆಡಳಿತ ಈ ಪ್ರದೇಶದಲ್ಲೂ ಇತ್ತು ಎನ್ನುವುದಕ್ಕೆ ಸಾಕ್ಷಿಯಾಗಿದೆ.

ರೋಣದ ಅಬ್ಬಿಗೇರಿ, ಕಾಲಕಾಲೇಶ್ವರ, ಗಾಡಗೋಳಿ, ಸವಡಿ[೩]ಗಳಲ್ಲಿ ವಿಜಯನಗರದ ಅರಸರಾದ ಎರಡನೇ ಹರಿಹರ, ಎರಡನೇ ದೇವರಾಯ ಹಾಗೂ ಕೃಷ್ಣದೇವರಾಯನಿಗೆ ಸಂಬಂಧಿಸಿದ ಶಾಸನಗಳು ದೊರೆತಿವೆ. ಈ ಶಾಸನಗಳು ಗ್ರಾಮದಾನ, ಭೂದಾನ ಹಾಗೂ ದೇವಾಲಯದ ಜೀರ್ಣೋದ್ಧಾರ ಮಾಡಿಸಿದ ಉಲ್ಲೇಖಗಳನ್ನು ಹೊಂದಿವೆ.

ಒಟ್ಟಾರೆಯಾಗಿ ಈ ಮೇಲಿನ ಎಲ್ಲ ಅರಸು ಮನೆತನಗಳು ರೋಣ ಪ್ರದೇಶವನ್ನು ಆಳಿದ್ದರೆಂಬುದಕ್ಕೆ ಅವರು ಬಿಟ್ಟು ಹೋದ ಕುರುಹುಗಳೇ ಸಾಕ್ಷಿಯಾಗಿವೆ. ಈ ಎಲ್ಲ ಆಧಾರಗಳು ನಮಗೆ ರೋಣ ತಾಲೂಕಿನ ಇತಿಹಾಸವನ್ನು ಕಟ್ಟಿಕೊಡುವಲ್ಲಿ ಪ್ರಮುಖ ಪಾತ್ರವಹಿಸಿವೆ ಎಂದು ಹೇಳಬಹುದು.

**ಅಡಿಟಿಪ್ಪಣಿಗಳು**

೧. ಗೋಪಾಲ ಆರ್. (ಸಂ), **ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** ಪು.೮

೨. **ವಿಷಯ ವಿಶ್ವಕೋಶ,** ಪು.೮೬೮

೩. **ಅದೇ,** ಪು.೮೬೮

೪. **ಅದೇ,** ಪು.೮೬೮

೫. ಗೋಪಾಲ ಆರ್. (ಸಂ), **ಪೂರ್ವೋಕ್ತ** ಪು.೧೧–೧೨

೬. **ಅದೇ,** ಪು.೧೪

೭. **ಅದೇ,** ಪು.೧೫

೮. **ಅದೇ,** ಪು.೧೭

೯. **ಅದೇ,** ಪು.೧೭

೧೦. **ಅದೇ,** ಪು.೧೭

೧೧. ಶಿವತಾರಕ್ ಕೆ.ಬಿ., **ಕರ್ನಾಟಕ ಪುರಾತತ್ವ ನೆಲೆಗಳು,** ಪು.೧೬೦

೧೨. ವ್ಹಿ.ಕೆ.ಹೊನವಾಡ, **ರೋಣ ತಾಲೂಕಿನ ಶಾಸನಗಳು : ಒಂದು ಅಧ್ಯಯನ**(ಅಪ್ರಕಟಿತ ಎಂ.ಫಿಲ್.ಪ್ರಬಂಧ) ಪು.೧-೨

೧೩. ಗೋಪಾಲ ಆರ್. (ಸಂ), **ಪೂರ್ವೋಕ್ತ,** ಪು.೧೯೬

೧೪. ಬಾಲಸುಬ್ರಮಣ್ಯ, ಸಿ.ಎಸ್.ವಾಸುದೇವನ ಮತ್ತು ರಮೇಶನಾಯಕ(ಸಂ), **ಕರ್ನಾಟಕ ದೇವಾಲಯಕೋಶ : ಗದಗ ಜಿಲ್ಲೆ** ಪು.೭ ಹಾಗೂ ಎಂ.ಎನ್.ಕಡಪಟ್ಟಿ, **ಕರ್ನಾಟಕದಲ್ಲಿ ಶೈವ ಧರ್ಮ,** ಪು.೩೩

೧೫. **ಧಾರವಾಡ ಜಿಲ್ಲಾ ಶಾಸನ ಸೂಚಿ,** ಪು.೧೭

೧೬. ನರೇಗಲ್ಲ ಎಸ್.ಎಸ್., **ಉತ್ತರ ಗದಗ ಜಿಲ್ಲೆಯ ಶಾಸನಗಳು,** ಪು.೧೮

೧೭. **ಧಾರವಾಡ ಜಿಲ್ಲಾ ಶಾಸನ ಸೂಚಿ,** ಪು.೧೬-೧೯

೧೮. ಭಟ್‌ಸೂರಿ ಕೆ.ಜಿ. (ಸಂ), **ಶಾಸನ ಅಧ್ಯಯನ,** ಸಂಪುಟ-೩, ಸಂಚಿಕೆ-೧, ಪು.೧ ರಿಂದ ೧೦

೧೯. **ಧಾರವಾಡ ಜಿಲ್ಲಾ ಶಾಸನ ಸೂಚಿ,** ಪು.೧೬

೨೦. **ಅದೇ**

೨೧. **ಅದೇ,** ಪು.೧೮

೨೨. **ಅದೇ,** ಪು.೧೮

೨೩. **ಅದೇ,** ಪು.೧೮

೨೪. **ಅದೇ,** ಪು.೧೯

೨೫. **ಅದೇ,** ಪು.೧೯

೨೬. **ಅದೇ,** ಪು.೧೬-೧೯

೨೭. ನರೇಗಲ್ಲ ಎಸ್.ಎಸ್., **ಪೂರ್ವೋಕ್ತ,** ಪು.೧೮

೨೮. **ಧಾರವಾಡ ಜಿಲ್ಲಾ ಶಾಸನ ಸೂಚಿ,** ಪು.೧೬-೧೯

೨೯. **ಅದೇ,**

೩೦. **ಅದೇ,**

೩೧. **ಅದೇ,**

೩೨. **ಅದೇ,**

೩೩. **ಅದೇ,**

೩

# ಶೈವ ಧರ್ಮದ ಉಗಮ ಮತ್ತು ಬೆಳವಣಿಗೆ

ಧರ್ಮ ಮತ್ತು ದೇವಾಲಯಗಳಿಗೆ ಕಾರಣೀಭೂತ ಮಾನವ. ಈತನೇ ದೇವರನ್ನು ಮೂಲವಾಗಿಟ್ಟುಕೊಂಡು, ಧರ್ಮವನ್ನು ಸೃಷ್ಟಿಸಿ, ಧರ್ಮ ಮತ್ತು ದೇವಾಲಯಗಳಿಗೆ ಅವಿನಾಭಾವ ಸಂಬಂಧವನ್ನು ಕಲ್ಪಿಸಿದ ದೇವಾಲಯಗಳು ಧರ್ಮದ ತಳಹದಿಯ ಮೇಲೆ ಸ್ಥಾಪಿತಗೊಂಡು, ಧರ್ಮದ ಹಿನ್ನೆಲೆಯಲ್ಲಿಯೇ ಬೆಳವಣಿಗೆ ಹೊಂದಿದವು. ಹಾಗಾಗಿ ದೇವಾಲಯಗಳನ್ನು ಧರ್ಮದ ಹೆಸರಿನಲ್ಲಿಯೇ ಗುರುತಿಸುವ ರೂಢಿ ಇದೆ. ಉದಾ : ಶೈವ ದೇವಾಲಯಗಳು, ವೈಷ್ಣವ ದೇವಾಲಯಗಳು, ಜೈನ ಮತ್ತು ಬೌದ್ಧ ದೇವಾಲಯಗಳು. ಹೀಗೆ ದೇವಾಲಯ ನಿರ್ಮಾಣದಲ್ಲಿ ಧರ್ಮದ ಪ್ರಾಮುಖ್ಯತೆ ಎಷ್ಟಿದೆ ಎಂಬುದನ್ನು ಗಮನಿಸಬಹುದು. ಆದ್ದರಿಂದ ದೇವಾಲಯಗಳ ಅಧ್ಯಯನದಲ್ಲಿ ದೇವಾಲಯಗಳ ಮೊದಲು ಅದರ ಹಿಂದಿರುವ ಧರ್ಮದ ಬಗೆಗೆ ತಿಳಿಯುವುದು ಸೂಕ್ತ. ಪ್ರಸ್ತುತ ಅಧ್ಯಯನವು ಶೈವ ದೇವಾಲಯಗಳಿಗೆ ಸಂಬಂಧಿಸಿರುವುದರಿಂದ ಶೈವ ಧರ್ಮ, ಅದರ ಪ್ರಾಚೀನತೆ, ಪ್ರಾಮುಖ್ಯತೆ ಹಾಗೂ ಬೆಳವಣಿಗೆಗಳನ್ನು ತಿಳಿಸುವುದು ಅವಶ್ಯಕ. ಚಿರಪರಿಚಿತವಾದ ಶೈವ ಧರ್ಮದ ಬಗೆಗೆ ಸರ್ವರಿಗೂ ತಿಳಿದೇ ಇದೆ. ಆದರೂ ಇಲ್ಲಿ ಅದರ ಸಂಪೂರ್ಣ ವಿವರಣೆಯನ್ನು ಸಂಕ್ಷಿಪ್ತ ರೂಪದಲ್ಲಿ ಪರಿಚಯಿಸಲು ಪ್ರಯತ್ನಿಸಲಾಗಿದೆ.

## ಪ್ರಾಚೀನತೆ

ಧರ್ಮಗಳಲ್ಲಿಯೇ ಪ್ರಾಚೀನವಾದುದು ಮತ್ತು ಭಾರತದಲ್ಲಿ ಹೆಚ್ಚು ವ್ಯಾಪಕಗೊಂಡ ಧರ್ಮವೆಂದರೆ ಅದು ಶೈವ ಧರ್ಮ. ಶೈವ ಧರ್ಮದ ಮೂಲ ಮತ್ತು ಅದು ಬೆಳೆದು ಬಂದ ಬಗೆ ಇನ್ನೂ ಅಸ್ಪಷ್ಟವಾಗಿದೆ. ಒಂದೆಡೆ ಪುರಾತತ್ವ ಆಕರಗಳು ಇನ್ನೊಂದೆಡೆ ವಿವಿಧ ಮಾದರಿಯ ಸಾಹಿತ್ಯಿಕ ಆಕರಗಳು ಈ ಕುರಿತು ಅಲ್ಪ ಸ್ವಲ್ಪ ಚಿತ್ರಣ ನೀಡುತ್ತವೆ.[೧] ಪುರಾತತ್ವ ಆಕರಗಳ ಆಧಾರದ ಮೇಲೆ ಶೈವ ಧರ್ಮವು ಹರಪ್ಪ ಸಂಸ್ಕೃತಿಯಲ್ಲಿಯೇ ಪ್ರಚಲಿತದಲ್ಲಿತ್ತು ಎಂದು ವಿದ್ವಾಂಸರು ಗುರುತಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಶೈವ ಧರ್ಮ ಹರಪ್ಪ ಸಂಸ್ಕೃತಿ ಗಿಂತಲೂ ಮೊದಲೇ ಅಸ್ತಿತ್ವದಲ್ಲಿದ್ದಿರಬಹುದೆಂದು ಊಹಿಸಬಹುದು. ಆದರೆ ಇದುವರೆಗೂ

ಹರಪ್ಪ ಲಿಪಿಯನ್ನೇ ಓದಲಾಗದೇ ಇರುವ ನಮಗೆ ಅದರ ಹಿಂದಿನ ಕಾಲವನ್ನು ಕೂಡ ತಿಳಿಯಲು ಸಾಧ್ಯವಾಗಿಲ್ಲ. ಆದ್ದರಿಂದ ನಮ್ಮ ಭಾರತದ ಪ್ರಾಚೀನತೆಯನ್ನು ಹರಪ್ಪ ಸಂಸ್ಕೃತಿಯಿಂದ ಅಂದರೆ ಕ್ರಿ.ಪೂ.೩೦೦೦ ದಿಂದ ಆರಂಭವಾಗುವುದು ಎಂದು ತಿಳಿಯಲಾಗಿದೆ. ಅಲ್ಲದೆ ಈ ಕಾಲದಲ್ಲಿಯೇ ಶೈವಾರಾಧನೆಯೂ ಇತ್ತು ಎಂಬುದನ್ನು ಪುರಾವೆಗಳ ಮೂಲಕ ಸ್ಪಷ್ಟಪಡಿಸಿದ್ದಾರೆ. ಕ್ರಿ.ಶ.೧೯೨೦ರಲ್ಲಿ ಉತ್ಖನನಗೊಳ್ಳಲಾರಂಭವಾದ ಸಿಂಧೂ ನಾಗರಿಕತೆಯ ಪ್ರಧಾನ ನೆಲೆಗಳಾದ ಮೊಹೆಂಜೋದಾರೋ ಮತ್ತು ಹರಪ್ಪ ನೆಲೆಗಳಲ್ಲಿ 'ಶಿವಲಿಂಗ' ಮತ್ತು 'ಯೋನಿ'ಯನ್ನು ಹೋಲುವ ಶಿಲೆಯ ಹಾಗೂ ಸುಡಾವೆ ಮಣ್ಣಿನ ಕುರುಹುಗಳು ದೊರಕಿವೆ. ರಾಜಸ್ಥಾನದ ಕಾಲಿಬಂಗಾನ್ ನೆಲೆಯಲ್ಲಿ ಸುಟ್ಟ ಮಣ್ಣಿನ ಯೋನಿ ಪೀಠ ಸಹಿತ ಲಿಂಗ ದೊರೆತಿದೆ. ಇದು ಲಿಂಗಾರಾಧನೆಯ ಪ್ರಾಚೀನತೆಯನ್ನು ಸ್ಪಷ್ಟವಾಗಿ ಸಿಂಧು ನಾಗರಿಕತೆಯ ಕಾಲಕ್ಕೆ ತಳ್ಳುತ್ತದೆ.[೨] ಅಲ್ಲದೆ ನಿವೇಶನದ ಉತ್ಖನನಗಳಲ್ಲಿ ಕೆಲವು ವಿಶಿಷ್ಟ ಮುದ್ರೆಗಳು ದೊರೆತಿದ್ದು ಅವು ಸಹ ಶೈವಾರಾಧನೆಯನ್ನು ಬಿಂಬಿಸುತ್ತವೆ. ಅವುಗಳಲ್ಲಿ ಪ್ರಮುಖವಾದುದೆಂದರೆ 'ಪಶುಪತಿ' ಮುದ್ರೆ, ಈ ಮುದ್ರೆಯಲ್ಲಿ ಚಿಕ್ಕ ಸ್ಟೂಲಿನ ಮೇಲೆ ಊರ್ಧ್ವಲಿಂಗಿಯಾಗಿ ಯೋಗಿಯಂತೆ ಕುಳಿತಿರುವ, ಮೈತುಂಬ ಆಭರಣಾಧಿಗಳನ್ನು ಧರಿಸಿರುವ ದೇವತೆಯಿದ್ದು, ತಲೆಯ ಮೇಲೆ ತ್ರಿಶೂಲದಂತೆ ಕಾಣುವ ಕೊಂಬಿನ ಕಿರೀಟವಿದೆ. ದೇವತೆಯ ಸುತ್ತಲೂ ಹುಲಿ, ಆನೆ, ಖಡ್ಗಮೃಗ ಮತ್ತು ಕೋಣದ ಚಿತ್ರಗಳಿದ್ದು ಬಹುಶಃ ಮನುಷ್ಯನ ಚಿತ್ರವೂ ಇದೆ. ಇದಲ್ಲದೆ ಸ್ಟೂಲಿನ ಕೆಳಗಡೆ ಎರಡು ಜಿಂಕೆಗಳನ್ನು ಚಿತ್ರಿಸಿದೆ, ಪಶುಗಳಿಂದ ಸುತ್ತುವರೆಯಲ್ಪಟ್ಟಿರುವುದರಿಂದ ಇವನನ್ನು 'ಪಶುಪತಿ' ಎಂದು ಗುರುತಿಸುವ ಪ್ರಯತ್ನವಾಗಿದೆ. ನಂತರದ ಸಾಹಿತ್ಯಿಕ ಪುರಾವೆಯ ಪ್ರಕಾರ ಪಶುಪತಿ ಎಂಬುದು ಶಿವನ ಒಂದು ಹೆಸರು ಎಂಬುದು ಸ್ಪಷ್ಟವಾಗುತ್ತದೆ.[೩] ಈ ಮುದ್ರೆಯಲ್ಲಿರುವ ಪಶುಪತಿ ಇನ್ನೊಂದು ದೃಷ್ಟಿಯಿಂದ ಕೂಡ ಗಮನೀಯನಾಗಿದ್ದಾನೆ. ಅವನು ಕುಳಿತಿರುವ ರೀತಿ ಯೋಗಿಯನ್ನು ನೆನಪಿಸುತ್ತದೆ. ಸಾಹಿತ್ಯದಲ್ಲಿ ಶಿವನನ್ನು ಮಹಾಯೋಗಿ ಎಂದು ಪರಿಗಣಿಸಿರುವುದು ಈ ದೃಷ್ಟಿಯಿಂದ ಕೂತುಹಲಕಾರಿಯಾಗಿದೆ. ಹೀಗೆ ಶೈವ ಧರ್ಮಕ್ಕೆ ಸಂಬಂಧಿಸಿದ ಕೆಲವು ಅಂಶಗಳನ್ನು ಸಿಂಧೂ ನಾಗರಿಕತೆಯ ಸಂದರ್ಭದಲ್ಲಿ ಗುರುತಿಸಲು ಸಾಧ್ಯವಾಗುತ್ತದೆ.[೪] ಮ್ಯಾಕೆರವರರು ಸಂಶೋಧಿಸಿದ ಇನ್ನೂ ಮೂರು ತರಹದ ಮುದ್ರೆಗಳಲ್ಲಿ ಇದೇ ತರಹದ ಚಿತ್ರಣ ಕಂಡುಬಂದಿದೆ. ಮುದ್ರೆ ನಂ.೨೨೨ರಲ್ಲಿ ಚಿಕ್ಕ ಸ್ಟೂಲ್‌ನ ಮೇಲೆ ಶಿವ ಯೋಗಿಯಂತೆ ಕುಳಿತಿದ್ದು, ಅವನ ಕಾಲುಗಳು ವೃಷಭದ ಕಾಲುಗಳನ್ನು ಹೋಲುತ್ತವೆ. ಅಲ್ಲದೆ ಬಹಳಷ್ಟು ಕೈಕಡಗಗಳನ್ನು ತೊಟ್ಟಿದ್ದು ತಲೆಯ ಅಲಂಕಾರವು ಅರಳಿ ಮರದ ಕೊಂಬೆಯಂತೆ ಇದೆ. ಕೊಂಬುಗಳು ತಲೆಯಿಂದ ಬೇರ್ಪಟ್ಟಿದ್ದು ಕೊಂಬೆಯಾಕಾರದ ಭಾಗಕ್ಕೆ ಅಂಟಿಸಿದಂತೆ

ಕಾಣುತ್ತದೆ. ಮತ್ತೊಂದು ಮುದ್ರೆಯಲ್ಲಿ (ನಂ.೨೩೫) ಶಿವ ನೆಲದ ಮೇಲೆ ಕುಳಿತಿದ್ದು, ಕೊಂಬುಗಳು ಸುರುಳಿಯಾಕಾರದ ಹೂಗಳಂತೆ ಗಂಟಿಕ್ಕಿವೆ. ಕೊಂಬುಗಳುಳ್ಳ ಮುಖವಾಡಗಳು ಮೇಕೆಯನ್ನು ಹೋಲುತ್ತವೆಯೇ ಹೊರತು ವೃಷಭದಲ್ಲ[೫] ಎಂದು ತಿಳಿಸಿದ್ದಾರೆ. ಒಟ್ಟಾರೆಯಾಗಿ ಇಲ್ಲಿ ದೊರೆತ ಇನ್ನೂ ಹಲವು ಮುದ್ರೆಗಳಲ್ಲಿರುವ ಶಿವನ ಭಂಗಿಯು ಶೈವಾರಾಧನೆ ಇರುವಿಕೆಗೆ ಸಾಕ್ಷಿಯಾಗಿವೆ.

ವೈದಿಕ ಸಾಹಿತ್ಯದಲ್ಲಿಯೂ ಶಿವನ ವರ್ಣನೆಗಳ ಉಲ್ಲೇಖಗಳಿವೆ. ವೈದಿಕ ಸಾಹಿತ್ಯದ ಅತೀ ಪ್ರಾಚೀನ ಭಾಗವೆಂದು ಪರಿಗಣಿಸಲ್ಪಟ್ಟಿರುವ ಋಗ್ವೇದ ಸಂಹಿತೆಯಲ್ಲಿ ಶಿವನನ್ನು ರುದ್ರ ಎಂದು ಸಂಬೋಧಿಸಲಾಗಿದೆ. ಇಲ್ಲಿ ಉಲ್ಲೇಖಿತ ರುದ್ರನು ತದನಂತರ ಕಾಲದ 'ರುದ್ರ-ಶಿವ'ನಿಗೆ ಸಾಕಷ್ಟು ಹೋಲಿಕೆಯುಳ್ಳವನಾಗಿ ಗೋಚರಿಸುತ್ತಾನೆ.[೬] ಒಟ್ಟಾರೆಯಾಗಿ ವೈದಿಕ ಸಾಹಿತ್ಯಗಳಾದ ಋಗ್ವೇದದಲ್ಲಿ ರುದ್ರನನ್ನು ಶಿವ, ವೃಷಭ, ಮೀಢ್ವಃ, ಪಶುಪತಿ ಎಂದು; ಯಜುರ್ವೇದದಲ್ಲಿ ಭೂಮಿಯ ಅಧಿಪತಿ, ಸ್ವರ್ಗದ ವೈದ್ಯನೆಂತಲೂ ಹಾಗೂ ಮೈತ್ರೇಯ ಸಂಹಿತೆ ಮತ್ತು ಅಥರ್ವಣ ವೇದದಲ್ಲಿ 'ಮಹಾದೇವ' ಎಂದು ಉಲ್ಲೇಖಿಸಲಾಗಿದೆ ಎಂದು ಎಮ್.ಎನ್.ಕಡಪಟ್ಟಿಯವರು ತಾವು ಬರೆದ 'ಕರ್ನಾಟಕದಲ್ಲಿ ಶೈವಧರ್ಮ' ಎಂಬ ಕೃತಿಯಲ್ಲಿ ವೈದಿಕ ಸಾಹಿತ್ಯದಲ್ಲಿ ಶಿವನ ಉಲ್ಲೇಖಗಳನ್ನು ವಿವರಿಸುವ ಸಂದರ್ಭದಲ್ಲಿ ತಿಳಿಸಿದ್ದಾರೆ. ವ್ಯಾಸರಾಯ ರಚಿತ ಮಹಾಭಾರತದಲ್ಲಿ ಶಿವನ ಉಲ್ಲೇಖ ಅತ್ಯಂತ ಸ್ಪಷ್ಟವಾಗಿ ಗೋಚರಿಸುತ್ತದೆ. 'ಶಿವನಿಗೂ ಅರ್ಜುನನಿಗೂ ನಡೆದ ಯುದ್ಧದಲ್ಲಿ ಅರ್ಜುನ ಸೋತಾಗ, ಅವನನ್ನು ಮೆಚ್ಚಿದ ಶಿವನು ಪಾರ್ವತಿ ಸಮೇತ ಸಕಲ ವಸ್ತ್ರಾಭರಣಗಳೊಂದಿಗೆ ಪ್ರತ್ಯಕ್ಷವಾಗಿ ಪಾಶುಪತಾಸ್ತ್ರವನ್ನು ನೀಡುತ್ತಾನೆ.' ಇಂತಹ ವರ್ಣನೆಯೊಂದಿಗೆ ಶಿವನ ಇತರ ವರ್ಣನೆಗಳು ಈ ಮಹಾಗ್ರಂಥದಲ್ಲಿವೆ. ಶಿವ ಕಪ್ಪು ಜಿಂಕೆಯ ಚರ್ಮವನ್ನು ಮೇಲು ಹೊದಿಕೆಯನ್ನಾಗಿ ಧರಿಸಿರುವವನು, ಶುಕ್ಲವರ್ಣದವನು ಶ್ವೇತವಸ್ತ್ರ ಧರಿಸಿರುವವನು; ಬಿಳುಪಾದ ಭಸ್ಮವನ್ನು ಲೇಪಿಸಿಕೊಂಡಿರುವವನು. ವಿಶುದ್ಧವಾದ ಕರ್ಮದಲ್ಲಿ ನಿರತನಾದವನು, ಕೆಂಪು ಬಣ್ಣದವನು, ಕೆಂಪು ಬಣ್ಣದ ಬಟ್ಟೆಯನ್ನು ಧರಿಸಿದವನು; ಮಂಗಲ ಪಿನಾಕವೆಂಬ ಧನಸ್ಸನ್ನು ಕೈಯಲ್ಲಿ ಹಿಡಿದಿರುವನು. ಶಂಖ-ಶೂಲಧಾರಿ, ಕೃಷ್ಣಾಂಬರನಾದವನು, ಕಪ್ಪಗಿರುವ ಗುಂಗುರು ಕೂದಲನ್ನು ಹೊಂದಿರುವವನು; ತಲೆಯ ಮೇಲೆ ಎತ್ತರವಾದ ಶ್ವೇತಛತ್ರವನ್ನು ಹೊಂದಿರುವ ಶ್ರೇಷ್ಠವಾದ ಕಿರೀಟವನ್ನು ಧರಿಸಿರುವನು ಇತ್ಯಾದಿ. ಅರ್ಧನಾರೀಶ್ವರ ರೂಪದಲ್ಲಿ ಅರ್ಧಹಾರವನ್ನು ಅರ್ಧ ಕೇಯೂರವನ್ನು ಒಂದು ಕಿವಿಯಲ್ಲಿ ಕುಂಡಲವನ್ನು ಧರಿಸಿದ್ದಾನೆ. ಶರೀರದ ಅರ್ಧ ಭಾಗವನ್ನು ಚಂದನದಿಂದ ಲೇಪಿಸಿಕೊಂಡು, ಕಮಲಗಳ ಮಾಲೆಯಿಂದ ಕೆನ್ನೈದಿಲೆಗಳಿಂದ

ಅಲಂಕರಿಸಿಕೊಂಡಿರುವ ಅರ್ಧನಾರೀಶ್ವನು ನಿತ್ಯವೂ ತಲೆಯಲ್ಲಿ ಕಿರೀಟವನ್ನು ಭುಜಗಳಲ್ಲಿ ದೊಡ್ಡದಾದ ಕೇಯೂರಗಳನ್ನು, ಕೊರಳಲ್ಲಿ ಸರ್ಪವನ್ನು ಕಟಿಗೆ ಸರ್ಪಗಳನ್ನು ಧರಿಸಿದ್ದಾನೆ. ಸರ್ಪಗಳನ್ನು ಕರ್ಣಕುಂಡಲಗಳಾಗಿ, ಯಜ್ಞೋಪವೀತವಾಗಿ ಧರಿಸಿದ್ದಾನೆ. ಸುವರ್ಣಮಯವಾದ ಮಾಲೆಯನ್ನು ಧರಿಸಿ ಪರ್ವತದ ಸಾಲುಗಳಲ್ಲಿ ವಿಹರಿಸುತ್ತ ದೇವಶತ್ರುಗಳಾದ ರಾಕ್ಷಸರ ರುಂಡಗಳನ್ನೇ ಮಾಲೆಯ ರೂಪದಲ್ಲಿ ಧರಿಸಿದ್ದಾನೆ. ಕಾಲದಂಡವನ್ನು ಧರಿಸಿದ್ದಾನೆ.[೭] ಈ ವರ್ಣನೆಯಿಂದ ಶಿವನ ಸಂಪೂರ್ಣ ಚಿತ್ರಣವನ್ನು ಅರಿಯಬಹುದು. ಶಿವನನ್ನು ಲಿಂಗ ರೂಪದಲ್ಲಿ ಆರಾಧನೆ ಮಾಡುವ ರೂಢಿ ಇದೆ. ಋಗ್ವೇದದಲ್ಲಿ ಬರುವ ಶಿಶ್ನದೇವಾಃ ಪದದ ಅರ್ಥವನ್ನು ಶಿಶ್ನವನ್ನು ಪೂಜೆಗೆ ಸಂಕೇತವಾಗಿ ಬಳಸುತ್ತಿದ್ದ ಜನ ಎಂಬರ್ಥದಲ್ಲಿ ವ್ಯಾಖ್ಯಾನಿಸಲಾಗಿದೆ.[೮] ಲಿಂಗಗಳನ್ನು ಎರಡು ರೀತಿಯಲ್ಲಿ ವಿಂಗಡಿಸಲಾಗಿದೆ. ಚಲಲಿಂಗ ಮತ್ತು ಅಚಲಲಿಂಗ, ಚಲಲಿಂಗಗಳೆಂದರೆ ಚಲಿಸಬಹುದಾದಂತಹ ಅಥವಾ ಮಾನವನು ತೆಗೆದುಕೊಂಡು ಹೋಗಬಹುದಾದಂತಹ ಲಿಂಗಗಳು. ಇವುಗಳಲ್ಲಿಯೇ ಮೃಣ್ಮಯ, ಲೋಹಜ, ರತ್ನದ, ಧ್ವಾರಾಜ, ಶೈಲಜ ಮತ್ತು ಕ್ಷಣಿಕ ಎಂಬ ಐದು ಭಾಗಗಳಿವೆ. ಅಚಲಲಿಂಗ(ಸ್ಥಾವರಲಿಂಗ)ಗಳೆಂದರೆ ಚಲಿಸಲಾರದಂತಹ ಲಿಂಗಗಳು. ಇದರಲ್ಲಿ ಒಂಬತ್ತು ವಿಧಗಳು. ಸ್ವಯಂಬು, ಪೂರ್ವ, ದ್ವಾದಶ, ಗಾಣಪತ್ಯ, ಅಸುರ, ಸುರ, ಅರ್ಷ, ರಾಕ್ಷಸ, ಮಾನುಷ ಮತ್ತು ಬಾಣ ಲಿಂಗ.[೯] ಶಿವನ ಸರ್ವ ವ್ಯಾಪಿತ್ವವನ್ನು ಲಿಂಗದಲ್ಲಿ ಸಂಕೇತಿಸಲು ನಾಲ್ಕು ಇಲ್ಲವೆ ಐದು ಮುಖಗಳನ್ನು ತೋರಿಸುವುದಿದೆ. ಈ ಮುಖಗಳನ್ನು ಕ್ರಮವಾಗಿ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನ ಎಂದು ಗುರುತಿಸಲಾಗಿದೆ.[೧೦] ಹೀಗೆ ಲಿಂಗಾರಾಧನೆಯು ವೈವಿಧ್ಯತೆಯಿಂದೊಡಗೂಡಿ ಬೆಳೆಯಲಾರಂಭಿಸಿತು. ಶಿವನೊಂದಿಗೆ ಪರಿವಾರಾಲಾಯವು ಕಾಣಿಸಿಕೊಳ್ಳುವುದನ್ನು ಗಮನಿಸಬಹುದು. ಶಿವನ ಅರ್ಧಾಂಗಿ ಪಾರ್ವತಿ, ಪುತ್ರರಾದ ಕಾರ್ತಿಕೇಯ, ಗಣಪತಿ ಮತ್ತು ವಾಹನ ನಂದಿ. ಇದು ಶಿವನ ಪರಿವಾರಾಲಯ. ಶೈವ ಧರ್ಮ ಬಲಗೊಳ್ಳುತ್ತ ಹೋದಂತೆ ವಿಸ್ತೃತವಾಯಿತು. ಶೈವಧರ್ಮಕ್ಕೆ ಇಪ್ಪತ್ತೆಂಟು ಆಗಮಗಳು ಇದ್ದು, ಇವುಗಳನ್ನು ಶೈವಾಗಮಗಳೆಂದು ಕರೆಯಲಾಗಿದೆ. ಶಿವನು ಪಾರ್ವತಿಗೆ ಬೋಧಿಸಿದ ವಿಷಯಗಳೇ ಆಗಮಗಳಲ್ಲಿರುವವು ಎಂದು ನಂಬುತ್ತಾರೆ. ಆದ್ದರಿಂದ ಸಂಪ್ರದಾಯದ ಪ್ರಕಾರ, ಆಗಮಗಳ ಕರ್ತೃ ಪರಾಮಾತ್ಮನಾದ ಶಿವನೇ.[೧೧] ದೇವಸ್ಥಾನ ನಿರ್ಮಾಣ, ವಿಗ್ರಹಾರಾಧನೆ, ಪೂಜಾವಿಧಾನ ಇತ್ಯಾದಿಗಳೆಲ್ಲವೂ ಹಿಂದೂ-ಧರ್ಮವನ್ನು ಸೇರಿರುವುದು. ಆಗಮಗಳಿಂದಲೇ[೧೨] ಅಲ್ಲದೆ ಶೈವ ಧರ್ಮದಲ್ಲಿ ವಿವಿಧ ಪಂಥಗಳುಂಟು. ಅವು ಲಕುಲೀಶ, ಪಾಶುಪತ, ಕಾಪಾಲಕ, ಕಾಳಾಮುಖ. ಹೀಗೆ ಶೈವ ಧರ್ಮವು ಅತ್ಯಂತ ವಿಶಾಲಾರ್ಥವುಳ್ಳವೆಂದು ತಿಳಿಯಬಹುದು.

## ಶೈವ ಧರ್ಮದ ಬೆಳವಣಿಗೆ

ಪ್ರಾಚೀನವಾದ ಈ ಶೈವ ಧರ್ಮವು ಹಂತ ಹಂತವಾಗಿ ಬೆಳವಣಿಗೆ ಹೊಂದಿದುದನ್ನು ತಿಳಿಯಬಹುದು. ಮೊದಲಿದ್ದ ಲಿಂಗಾರಾಧನೆಯು ನಂತರದಲ್ಲಿ ಒಂದು ಹೆಜ್ಜೆ ಮುಂಬೆ ಸಾಗಿ ಸ್ಥಾವರಲಿಂಗ ಅಥವಾ ಅಚಲಲಿಂಗಗಳನ್ನು ಸ್ಥಾಪಿಸಿ ಅವುಗಳ ರಕ್ಷಣೆಗಾಗಿ ದೇವಾಲಯಗಳು ನಿರ್ಮಾಣವಾಗಲು ಸ್ಫೂರ್ತಿಯಾದವು. ಇತಿಹಾಸ ಕಾಲದಿಂದ ಶೈವ ಧರ್ಮದ ಬೆಳವಣಿಗೆಯನ್ನು ತಿಳಿಯತೊಡಗಿದಾಗ ಮೌರ್ಯರ ಕಾಲದಲ್ಲಿ ಶೈವ ಧರ್ಮಾಚರಣೆ ಅಷ್ಟಾಗಿ ಕಂಡುಬರುವುದಿಲ್ಲ. ಪ್ರಖ್ಯಾತ ಅರಸ ಅಶೋಕನ ಶಾಸನಗಳು ಶೈವ ಧರ್ಮದ ಕುರಿತು ಮೌನವಾದರೂ, ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಹಾಗೂ ಮತ್ತಿತರ ಕೃತಿಗಳಿಂದ ಶೈವ ಧರ್ಮದ ಬಲವಾದ ಅಸ್ತಿತ್ವ ಸೂಚಿತವಾಗಿದೆ.[೧೩] ಮೌರ್ಯರ ನಂತರದ ಶಾತವಾಹನರ ಕಾಲದಲ್ಲಿ ಬೌದ್ಧ ಧರ್ಮ ಪರಾಕಾಷ್ಠೆಯಲ್ಲಿದ್ದರೂ ಅವರ ಜೊತೆಗೆ ಶೈವ ಮತಾಚಾರಣೆಯೂ ಕೂಡ ಅಸ್ತಿತ್ವದಲ್ಲಿತ್ತು ಎಂಬುದಕ್ಕೆ ಅವರ ಕಾಲದ ಶಾಸನಗಳಲ್ಲಿನ ಕೆಲವು ಉಲ್ಲೇಖಗಳು, ಕೃತಿಗಳು ಹಾಗೂ ದೇವಾಲಯದ ಕುರುಹುಗಳು ಸಾಕ್ಷ್ಯವಾಗಿವೆ. ಶಾತವಾಹನ ದೊರೆ ಹಾಲನು ರಚಿಸಿದ 'ಗಾಥಾಸಪ್ತಶತಿ'ಯಲ್ಲಿ ಧರ್ಮಕ್ಕೆ ಸಂಬಂಧಿಸಿದ ವಿವರಗಳು ದೊರೆಯುತ್ತವೆ. ಇದರಲ್ಲಿ ಬೌದ್ಧಧರ್ಮ, ವೈಷ್ಣವ ಧರ್ಮ, ಶೈವ ಧರ್ಮಕ್ಕೆ ಸಂಬಂಧಿಸಿದ ಗಾಹೆಗಳಿವೆ. ಅದರಲ್ಲಿ ಶೈವ ಧರ್ಮಕ್ಕೆ ಸಂಬಂಧಿಸಿದ ಒಟ್ಟು ಗಾಹೆಗಳು ೯. ಇದರಲ್ಲಿ ೬ ಗಾಹೆಗಳು ಶಿವ ಪಾರ್ವತಿಯರಿಗೆ ಸಂಬಂಧಿಸಿವೆ. ಒಂದು ಗಾಹೆಯು ಶೈವ ಧರ್ಮದ ಕಾಪಾಲಿಕ ಪಂಥದ ಮಾಹಿತಿ ನೀಡುತ್ತದೆ. ಉಳಿದೆರಡು ಗಾಹೆಗಳು ಗಣೇಶನ ಕುರಿತು ಉಲ್ಲೇಖಗಳಾಗಿವೆ.[೧೪] ಶಾತವಾಹನ ಕಾಲದಲ್ಲಿ ಒಬ್ಬ ಅರಸನೇ ಧರ್ಮಗಳ ಕುರಿತಾಗಿ ಅದರಲ್ಲೂ ಶೈವ ಧರ್ಮದ ಕುರಿತಾಗಿ ಇಷ್ಟು ಮಾಹಿತಿಯನ್ನು ತನ್ನ ಸ್ವರಚಿತ ಕೃತಿಯಲ್ಲಿ ಒದಗಿಸಿರುವುದು ಅದಕ್ಕಿರುವ ಪ್ರಾಮುಖ್ಯತೆಯನ್ನು ತಿಳಿಸುತ್ತದೆ. ಆಂಧ್ರ ಪ್ರದೇಶದ ಚಿತ್ತೂರು ಜಿಲ್ಲೆಯ ಗುಡಿಮಲ್ಲಂ ಉತ್ಖನನದಲ್ಲಿ ಬೃಹದಾಕಾರದ ಪರಶುರಾಮೇಶ್ವರ ಲಿಂಗ ದೊರೆತಿದೆ. ಈ ಲಿಂಗದ ಕುರಿತು ವಿದ್ವಾಂಸರೆಲ್ಲರು "ಹಿಂದೂ ಶಿಲ್ಪಗಳಲ್ಲಿಯೇ ಅತಿ ಪ್ರಾಚೀನವಾದುದು." ಅಲ್ಲದೇ ಈ ಶಿಲ್ಪವು ಶೈವತ್ವದ ಸಂಪೂರ್ಣ ಬಿಂಬವನ್ನು ಒಳಗೊಂಡಿದೆ. ಹಾಗೂ "ಲಿಂಗಾರಾಧನೆಯ ಇತಿಹಾಸ ಮತ್ತು ಸ್ವರೂಪವನ್ನು ತಿಳಿಯುವಲ್ಲಿ ಮಹತ್ವದ್ದು"[೧೫] ಎಂದಿದ್ದಾರೆ. ಲಿಂಗವಿರುವ ಈ ದೇವಾಲಯವು ಗಜಪುಷ್ಠಾಕೃತಿಯಲ್ಲಿದ್ದು, ಸುಮಾರು ೧೨ನೇ ಶತಮಾನದಲ್ಲಿ ಚೋಳರ ಪ್ರೋತ್ಸಾಹದಡಿಯಲ್ಲಿ ನಿರ್ಮಾಣವಾಗಿದ್ದರೂ ಈ ದೇವಾಲಯದ ಇತಿಹಾಸ ಸಾಕಷ್ಟು ಹಿಂದಕ್ಕೆ ಹೋಗುತ್ತದೆ. ಬಹುಶಃ ಬಾಣ ಅರಸರು ಇದಕ್ಕೆ

ಕಾರಣೀಭೂತರಾಗಿದ್ದಾರೆ. ಐ.ಕೆ.ಶರ್ಮರವರು ಈ ದೇವಾಲಯದ ಸಂರಕ್ಷಣಾ ಕಾರ್ಯಕ್ಕೆ ಸಂಬಂಧಿಸಿದಂತೆ ಉತ್ಖನನ ಮಾಡಿದ್ದರು. ಅವರ ಪ್ರಕಾರ ಪ್ರಾಚೀನ ಹಂತದಲ್ಲಿ ಅಂದರೆ ಶಾತವಾಹನರ ಕಾಲದಲ್ಲಿ ಆಕಾಶಕ್ಕೆ ತೆರೆದುಕೊಂಡಿತ್ತು. ಇದರ ಸುತ್ತಲೂ ಒಂದು ಚೌಕಾಕಾರದ ವೇದಿಕೆ ರಚಿತವಾಗಿತ್ತು. ಕಾಲಕ್ರಮೇಣ ಸುತ್ತಲೂ ಇಟ್ಟಿಗೆಯ ಗಜಪ್ರಷ್ಠಾಕಾರದ ದೇವಾಲಯ ನಿರ್ಮಿಸಲಾಯಿತು. ಶಾತವಾಹನರ ಕಾಲಕ್ಕೆ ಸಂಬಂಧಿಸಿದಂತೆ ಪ್ರಾಣಿ ಬಲಿ ನೀಡಿದ ಪುರಾವೆಗಳಿವೆ ಎಂದು ಹೇಳಿದ್ದಾರೆ.[೧೬] ಈ ಹೇಳಿಕೆಯಿಂದ ಮೊದಮೊದಲು ಕೇವಲ ಲಿಂಗಗಳು ಪ್ರತಿಷ್ಠಾಪನೆಗೊಂಡವು ಆನಂತರದ ಕಾಲಘಟ್ಟದಲ್ಲಿ ಅವುಗಳಿಗೆ ಗರ್ಭಗೃಹಗಳನ್ನು, ದೇವಾಲಯಗಳನ್ನು ನಿರ್ಮಿಸುವ ಪರಂಪರೆ ಬೆಳೆಯಿತು ಎಂದು ಊಹಿಸಬಹುದು.

ಶೈವಧರ್ಮವನ್ನು ಪ್ರೋತ್ಸಾಹಿಸಿ ಬೆಳೆಸಿದ ಪ್ರಾಚೀನ ಅರಸುಮನೆತನಗಳಲ್ಲಿ ಇಕ್ಷ್ವಾಕುಗಳು ಪ್ರಮುಖ ಸೇರ್ಪಡೆಯಾಗುತ್ತಾರೆ. ಈ ಹೇಳಿಕೆಯನ್ನು ಇವರ ಕಾಲದಲ್ಲಿ ನಿರ್ಮಾಣಗೊಂಡ ವಾಸ್ತುಶಿಲ್ಪ ಸ್ಮಾರಕಗಳ ಆಧಾರದ ಮೇಲೆ ಸಮರ್ಥಿಸಬಹುದು. ಆಂಧ್ರ ಪ್ರದೇಶದ ಗುಂಟೂರು ಜಿಲ್ಲೆಯ ನಾಗಾರ್ಜುನಕೊಂಡದ ವಾಯವ್ಯ ಭಾಗಕ್ಕಿರುವ ಮತ್ತು ಇಕ್ಷ್ವಾಕುಗಳ ಸ್ಮಶಾನವೆಂದು ಕರೆಯಲ್ಪಡುವ ಬೆಟ್ಟಮಯ ಪ್ರದೇಶದಲ್ಲಿ ಆಯತಾಕಾರದ ಇಟ್ಟಿಗೆಗಳಿಂದ ನಿರ್ಮಾಣಗೊಂಡ ದೇವಾಲಯದ ಕಟ್ಟಡವನ್ನು ಗುರುತಿಸಲಾಗಿದೆ. ಅಲ್ಲದೆ ಈ ಸ್ಥಳದಲ್ಲಿ ಒಂದು ಶಿವಲಿಂಗವನ್ನು ಹೊರತೆಗೆಯಲಾಗಿದ್ದು, ದೇವಾಲಯದ ಎದುರಿಗಿರುವ ಇಟ್ಟಿಗೆಗಳ ವೇದಿಕೆಯಲ್ಲಿಯೇ ೩೭೫ ಎತ್ತರದ ಅಷ್ಟಭುಜಾಕೃತಿಯುಳ್ಳ ಧ್ವಜಸ್ತಂಭ ನಿಲ್ಲಿಸಿರುವುದನ್ನು ಪತ್ತೆ ಮಾಡಲಾಗಿದೆ. ಹಾಗೂ ದೇವಾಲಯದ ಅವಶೇಷಗಳಲ್ಲಿ ದೊರೆತ ತ್ರುಟಿತಗೊಂಡ ಶಾಸನವು ಕ್ರಿ.ಶ.೩೩೩ರ ಎಹವಲ ಚಂಡಮೂಲನ ಆಳ್ವಿಕೆಯ ಕಾಲಕ್ಕೆ ಸೇರಿದ್ದು, ದೇವಕುಲದ ಮಂದಿರ ಎಂದು ಕರೆಯಲ್ಪಡುವ ಮತ್ತು ಉತ್ತರಾಭಿಮುಖವಾಗಿ ಹರಿಯುವ ನದಿಯ ಹತ್ತಿರ ಸ್ತಲವನ್ನು ನಿರ್ಮಿಸಿದ ಉಲ್ಲೇಖವನ್ನು ಹೊಂದಿದೆ. ಈ ವಿವರಣೆಯ ಆಧಾರದ ಮೇಲೆ ಐ.ಕೆ.ಶರ್ಮರವರು ಶವಸಂಸ್ಕಾರದ ನಂತರ ಮೊದಲಿಗೆ ಲಿಂಗ ದರ್ಶನವನ್ನು ಪಡೆಯುವ ಸಲುವಾಗಿ ಸ್ಮಶಾನದ ಸಮೀಪ ಶಿವ ದೇವಾಲಯಗಳನ್ನು ನಿರ್ಮಿಸುತ್ತಿದ್ದರಿಬಹುದೆಂದು ಅಭಿಪ್ರಾಯಪಟ್ಟಿದ್ದಾರೆ. ಎಹವಲ ಚಂತಮೂಲನ ಕಾಲದ ಕ್ರಿ.ಶ.ಸುಮಾರು ೩ನೇ ಶತಮಾನದ ಉತ್ತರಾರ್ಧದ ಶಾಸನವೊಂದು ಇನ್ನೊಂದು ಶಿವ ದೇವಾಲಯದ (ಸರ್ವದೇವ ದೇವಾಲಯ) ಸ್ಥಾಪನೆಯನ್ನು ಉಲ್ಲೇಖಿಸುತ್ತದೆ. ಅಲ್ಲದೆ ಇನ್ನೊಂದು ಮಹತ್ವದ ಶಾಸನವು ಮಹಾದೇವಿ ಪುಷ್ಪ ಭದ್ರಸ್ವಾಮಿಯನ್ನು ಹೆಸರಿಸಿದೆ. ವಾಸಿಷ್ಠಿಪುತ್ರ ಎಹವಲ ಚಂತಮೂಲನ ಆಳ್ವಿಕೆಯಲ್ಲಿ ರಾಜಕುಮಾರನೂ, ಮಹಾಸೇನಾಪತಿಯೂ ಆದ ವೀರಪುರುಷದತ್ತ ತನ್ನ ಮಾತಾಪಿತೃಗಳಿಗೆ ಪುಣ್ಯವಾಗಲೆಂದೂ ಎರಡೂ ಕುಟುಂಬದವರಿಗೆ ಆಯುವೃದ್ಧಿ,

ಧನವೃದ್ಧಿಯಾಗಲೆಂದು ಬಯಸಿ ಧ್ವಜಸ್ತಂಭವನ್ನು ನಿಲ್ಲಿಸಿದನು ಎಂಬ ಉಲ್ಲೇಖವನ್ನು ಒಳಗೊಂಡಿದೆ. ಇದು ಶಿವ ದೇವಾಲಯದ ಮುಂದೆ ಧ್ವಜಸ್ತಂಭವನ್ನು ನಿಲ್ಲಿಸಿರುವುದರ ಪ್ರಥಮ ಉಲ್ಲೇಖವಾಗಿದೆ.[೧೮] ಹಾಗೆಯೇ ಚೇಜರ್ಲಾದಲ್ಲಿರುವ ಪ್ರಾಚೀನ ಗಜಪ್ರಷ್ಠಾಕಾರದ ದೇವಾಲಯವು ಸಹ ಪ್ರಮುಖ ಶೈವ ದೇವಾಲಯಗಳಲ್ಲಿ ಒಂದು ಎಂದು ಪರಿಗಣಿಸಲ್ಪಟ್ಟಿದೆ. ಇಲ್ಲಿ ಉಲ್ಲೇಖವಾದ ಶಿವ ದೇವಾಲಯಗಳಿಗೆ ಗ್ರಾಮಗಳನ್ನು ದತ್ತಿ ಕೊಟ್ಟಿರುವ ಉಲ್ಲೇಖಗಳನ್ನು ಗಮನಿಸಿದರೆ ಅವುಗಳ ಪೂಜಾವಿಧಿಗಳು ಅವಿರತವಾಗಿ ನಡೆದುಕೊಂಡು ಹೋಗಲು ಅರ್ಚಕ ವರ್ಗ ಮತ್ತು ಇತರ ಪಾತ್ರವರ್ಗದವರನ್ನು ನೇಮಿಸಲ್ಪಟ್ಟಿರುವುದು ಪರೋಕ್ಷವಾಗಿ ಸೂಚಿತವಾಗುತ್ತದೆ.[೧೯] ಹೀಗೆ ಶೈವಧರ್ಮವು ಇಕ್ಷ್ವಾಕುಗಳ ಕಾಲದಲ್ಲಿ ಹೆಚ್ಚು ಮಾನ್ಯತೆಯನ್ನು ಹೊಂದಿತ್ತು ಮತ್ತು ಅದು ಮುಂದುವರೆದುದನ್ನು ಗಮನಿಸಬಹುದು. ಇಕ್ಷ್ವಾಕುಗಳ ನಂತರ ವಿಷ್ಣುಕುಂಡಿನ್ ಅರಸರು ಶೈವ ಧರ್ಮವನ್ನು ಮುಂದುವರಿಸಿದರು. ಎಲ್ಲೇಶ್ವರಂನ ಉತ್ಖನನದಲ್ಲಿ ದೊರೆತ, ಶೈವ ದೇವಾಲಯ ಮತ್ತು ಹೈದಾರಾಬಾದ್‌ನ ಕೀಸರಿಗುಟ್ಟಾದಲ್ಲಿ ದೊರೆತ ಶೈವ ದೇವಾಲಯಗಳು[೨೦] ಇಟ್ಟಿಗೆಯ ರಚನೆಗಳಾಗಿದ್ದು, ವಿಷ್ಣುಕುಂಡಿ ಅರಸು ಮನೆತನದ ಆಳ್ವಿಕೆಯ ಶೈವ ಧರ್ಮದ ಮೇಲೆ ಬೆಳಕು ಚೆಲ್ಲುತ್ತವೆ. ಅಂತೆಯೇ ತಮಿಳು ದೇಶದಲ್ಲಿ ಪುರಾತನ ಕಾಲದಿಂದಲೂ ಶೈವಮತ ಬಹುಜನರ ಮತವಾಗಿತ್ತು. ಈ ಧರ್ಮಕ್ಕೆ ಆಶ್ರಯಕೊಟ್ಟು ಇದನ್ನು ಬೆಳೆಸಿದವರು ಚೋಳರಾಜರು. ಅವರ ವಂಶದಲ್ಲಿ ಅನೇಕ ರಾಜರು ದೊಡ್ಡ ಶಿವಭಕ್ತರಾಗಿದ್ದು ಶೈವಧರ್ಮದ ಆಧಾರಸ್ತಂಭರಾಗಿದ್ದರು.

ವಿಶೇಷವಾಗಿ ದಕ್ಷಿಣದಲ್ಲಿ ಶೈವ ಧರ್ಮವನ್ನು ಹಬ್ಬಿಸಲು ಕಾರಣರಾದವರು ಅರವತ್ತುಮೂರು ಮಂದಿ ಪುರಾತನರು ಇವರಲ್ಲಿ ಅನೇಕರ ಕಾಲವನ್ನು ನಿಶ್ಚಯವಾಗಿ ಹೇಳುವುದು ಸಾಧ್ಯವಿದೆ. ಅಪ್ಪಾರ್ ಅಥವಾ ತಿರುನಾವುಕ್ಕರಸು, ತಿರುಜ್ಞಾನ ಸಂಬಂಧಿ ಅಥವಾ ಪಿಳ್ಳೈನಾಯನಾರ್ ಮತ್ತು ಸುಂದರನಂಬಿ ಇವರು ಕ್ರಿ.ಶ.೬೦೦ ರಿಂದ ೮೦೦ರೊಳಗೆ ಇದ್ದರು. 'ತಿರುವಾಚಗಂ' ಕರ್ತೃವಾದ ಮಾಣಿಕ್ಕವಾಚಗರ್ ಕ್ರಿ.ಶ.೮೦೦ ರಿಂದ ೧೦೦೦ದ ಒಳಗೆ ಇದ್ದಿರಬೇಕು. ದ್ರಾವಿಡವೇದ ಎಂದು ಕರೆಯಲ್ಪಡುವ 'ತಿರುಮುರೈ' ಕರ್ತವಾದ ನಂಬಿಯಾಂಡಾರ್ ಸುಮಾರು ೧೧ನೆಯ ಶತಮಾನದಲ್ಲಿ ಇದ್ದಿರಬಹುದು. ಮೇಲಿನ ಎಲ್ಲ ಸತ್ಪುರುಷರೂ ಶೈವ ಧರ್ಮದ ಪ್ರಸಾರದಲ್ಲಿ ಬಹಳ ಆಸ್ಥೆಯನ್ನು ವಹಿಸಿ ಕೆಲಸ ಮಾಡಿದರು.[೨೧]

ಮಹಾರಾಷ್ಟ್ರದ ಎಲ್ಲೋರಾ ಮತ್ತು ಎಲಿಫಂಟಾಗಳಲ್ಲಿ ಶೈವ ಗುಹಾಲಯಗಳಿದ್ದು ಇವು ವಿನ್ಯಾಸ ಮತ್ತು ಶೈಲಿಯ ದೃಷ್ಟಿಯಿಂದ ವಿಶಿಷ್ಟವಾಗಿವೆ. ಇವುಗಳ ಕಾಲ ನಿರ್ಣಯದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿದ್ದು ಕೆಲವರು ಇವುಗಳನ್ನು ರಾಷ್ಟ್ರಕೂಟರ ಕಾಲಕ್ಕೆ ಇನ್ನೂ ಕೆಲವರು ಬಾದಾಮಿಯ ಚಾಳುಕ್ಯರ ಕಾಲಕ್ಕೆ ಹಾಗೂ ಮತ್ತೆ ಕೆಲವರು ಪ್ರಾಚೀನ

ಕಲಚೂರಿಗಳ ಕಾಲಕ್ಕೆ ಅನ್ವಯಿಸಿದ್ದಾರೆ. ಇತ್ತೀಚೀನ ಅಧ್ಯಯನಗಳ ಪ್ರಕಾರ ಉತ್ತರ ದಖ್ಖನಿನ ಪ್ರದೇಶ ಕಲಚೂರಿಗಳ ಹಿಡಿತದಲ್ಲಿದ್ದಾಗ ಮುಖ್ಯವಾಗಿ ಕಳಚೂರಿ ಕೃಷ್ಣರಾಜನ ಕಾಲದಲ್ಲಿ ಇವು ನಿರ್ಮಾಣವಾಗಿರಬೇಕೆಂಬ ಅಭಿಪ್ರಾಯಕ್ಕೆ ಹೆಚ್ಚಿನ ಮನ್ನಣೆ ದೊರೆತಿದೆ.[೨೨] ಅದೇನೇ ಇದ್ದರೂ ಭಾರತೀಯ ಕಲಾ ವಾಸ್ತುಶಿಲ್ಪ ಅಧ್ಯಯನದಲ್ಲಿ ಈ ಗುಹಾಲಯಗಳಿಗೆ ಹೆಚ್ಚಿನ ಮಾನ್ಯತೆ ನೀಡಲಾಗುತ್ತದೆ. ಇಲ್ಲಿನ ಹೆಚ್ಚಿನ ದೇವಾಲಯಗಳು ತಲವಿನ್ಯಾಸದಲ್ಲಿ ಸಾಂಧಾರ ರೀತಿಯಲ್ಲಿ ಇರುವುದು ಇವುಗಳ ಪ್ರಮುಖ ಲಕ್ಷಣವಾಗಿದೆ. ಅಲ್ಲದೆ ಎಲ್ಲೋರಾದ ೨೯ನೇ ಗುಹಾಲಯ ಮತ್ತು ಎಲಿಫಂಟಾದ ಬೃಹತ್ ಶೈವ ಗುಹಾಲಯ ಇವೆರಡರಲ್ಲೂ ಗರ್ಭಗೃಹ ಸರ್ವತೋಭದ್ರ ರೀತಿಯಲ್ಲಿವೆ. ಅಂದರೆ ಗರ್ಭಗೃಹದ ನಾಲ್ಕು ಗೋಡೆಗಳಲ್ಲಿಯೂ ದ್ವಾರಗಳಿವೆ. ಒಳಗಡೆ ಪೀಠವನ್ನು ಹುಟ್ಟುಗಲ್ಲಿನಿಂದ ಕೊರೆದು ನಿರ್ಮಿಸಲಾಗಿದೆ. ಲಿಂಗವನ್ನು ಮಾತ್ರ ಬೇರೆಯದಾಗಿ ತಯಾರಿಸಿ ಪೀಠದ ರಂಧ್ರದೊಳಗೆ ಸೇರಿಸಲಾಗಿದೆ. ಗರ್ಭಗೃಹವು ಸರ್ವತೋಮುಖ ಮಾದರಿಯಾಗಿರುವುದರಿಂದ ಒಳಗಿರುವ ಲಿಂಗವು ಚತುರ್ಮುಖ ಲಿಂಗವೆಂದು ಊಹಿಸಬೇಕಾಗುತ್ತದೆ. ಅಂದರೆ ಮುಖಗಳನ್ನು ತೋರಿಸಿಲ್ಲದಿದ್ದರೂ ಇವು ಶೈವದ ತತ್ಪುರುಷ, ವಾಮದೇವ, ಅಘೋರ, ಸದ್ಯೋಜಾತ ಪರಿಕಲ್ಪನೆಗಳನ್ನು ಸಂಕೇತಿಕವಾಗಿ ಸೂಚಿಸಿದೆ.[೨೩]

ಆಂಧ್ರ ಪ್ರದೇಶದ ಮೆಹಬೂಬನಗರ ಜಿಲ್ಲೆಯ ಆಲಂಪುರ ಶಾಸನಗಳಿಂದ ತಿಳಿಯುವಂತೆ ಪ್ರಾಚೀನ ಹಥಂಪುರ ಬಾದಾಮಿ ಚಾಲುಕ್ಯರ ಆಳ್ವಿಕೆಯ ಉತ್ತಾರಾರ್ಧದಲ್ಲಿ ಶೈವರ ಪ್ರಬಲ ಚಟುವಟಿಕೆಯ ಕೇಂದ್ರವಾಗಿತ್ತು. ಇಲ್ಲಿಯ ನವಬ್ರಹ್ಮ ದೇವಾಲಯ ಶೈವ ದೇವಾಲಯಗಳಾಗಿದ್ದು, ಚಾಲುಕ್ಯರ ಬೇರೆ ಬೇರೆ ಅರಸರ ಕಾಲದಲ್ಲಿ ಅರಸರಿಂದಲೇ ಅಥವಾ ಅವರ ನೇರ ಸಂಬಂಧಿಕರಿಂದ ರಚಿತವಾಗಿವೆ. ಇಲ್ಲಿನ ಒಂಬತ್ತು ದೇವಾಲಯಗಳಲ್ಲಿ ತಾರಕಬ್ರಹ್ಮ ದೇವಾಲಯವನ್ನು ಹೊರತುಪಡಿಸಿದರೆ ಉಳಿದೆಲ್ಲ (ಅರ್ಕಬ್ರಹ್ಮ, ಬಾಲಬ್ರಹ್ಮ, ಕುಮಾರ ಬ್ರಹ್ಮ, ವೀರಬ್ರಹ್ಮ, ಪದ್ಮಬ್ರಹ್ಮ, ಗರುಡ ಬ್ರಹ್ಮ, ಸ್ವರ್ಗಬ್ರಹ್ಮ, ವಿಶ್ವಬ್ರಹ್ಮ) ದೇವಾಲಯಗಳು ಔತ್ತರೇಯ ಸಾಂಧಾರ ರೀತಿಯಲ್ಲಿ ನಿರ್ಮಿತವಾಗಿವೆ. ಬಹುಶಃ ಮೊದಲನೇ ವಿಕ್ರಮಾದಿತ್ಯನ ಕಾಲದಿಂದ ಇಲ್ಲಿ ದೇವಾಲಯಗಳ ನಿರ್ಮಾಣ ಆರಂಭಗೊಂಡಿತು. ಈ ಚಟುವಟಿಕೆ ವಿಜಯಾದಿತ್ಯನ ಆಳ್ವಿಕೆಯ ಮಧ್ಯಾವಧಿಯವರೆಗೂ ಮುಂದುವರಿದಂತೆ ಕಾಣುತ್ತದೆ.[೨೪]

ಹೀಗೆ ಭಾರತದಾದ್ಯಂತ ಇರುವ ದೇವಾಲಯಗಳಲ್ಲಿ ಹೆಚ್ಚಿನವು ಶೈವ ದೇವಾಲಯಗಳೇ ಆಗಿವೆ. ಆದ್ದರಿಂದಲೇ ಈ ಪ್ರಾಚೀನ ಶೈವ ಧರ್ಮವು ಪ್ರಸ್ತುತದಲ್ಲಿಯೂ ಅತ್ಯಂತ ವಿಸ್ತಾರಗೊಂಡ ಧರ್ಮವಾಗಿದೆ. ಮೇಲಿನ ವಿವರಣೆಯಲ್ಲಿ ಕರ್ನಾಟಕ ದೇವಾಲಯಗಳ

ಹಿನ್ನೆಲೆಯಲ್ಲಿನ ಶೈವಧರ್ಮವನ್ನು ಮಾತ್ರ ಹೊರತುಪಡಿಸಲಾಗಿದೆ. ಕಾರಣ ಪ್ರಸ್ತುತ ಅಧ್ಯಯನ ಅನುಕೂಲಕ್ಕಾಗಿ ಕರ್ನಾಟಕದಲ್ಲಿನ ಶೈವ ಧರ್ಮದ ಬೆಳವಣಿಗೆಯನ್ನು ಪ್ರತ್ಯೇಕವಾಗಿ ತಿಳಿಯುವುದು ಹೆಚ್ಚು ಸೂಕ್ತ.

## ಕರ್ನಾಟಕದಲ್ಲಿ ಶೈವಧರ್ಮ

ಕರ್ನಾಟಕದಲ್ಲಿ ಶೈವ ಧರ್ಮ, ದೇವಾಲಯಗಳ ನಿರ್ಮಾಣ ಮತ್ತು ನಿರ್ವಹಣೆಗೆ ಅಪಾರವಾಗಿ ಶ್ರಮಿಸಿದೆ. ವೈದಿಕ ತತ್ವಗಳನ್ನು ಬಿಡದೆಯೇ ದೇವಾಲಯಗಳು ಬೆಳೆಯಲು ಶೈವಧರ್ಮವು ಅತಿ ಹೆಚ್ಚಿನ ನೆರವು ನೀಡಿದೆ.[೨೫] ಕರ್ನಾಟಕವನ್ನು ಆಳಿ ಹೋದ ಹಲವು ಅರಸು ಮನೆತನಗಳು ಧರ್ಮಕ್ಕೆ ಉನ್ನತ ಸ್ಥಾನ ನೀಡಿ ಅದನ್ನು ಉಳಿಸಿ ಬೆಳೆಸಿದರು. ಹಲವು ಧರ್ಮಗಳು ಕರ್ನಾಟಕದಲ್ಲಿ ರಾಜಾಶ್ರಯವನ್ನು ಪಡೆದು ನೆಲೆಯನ್ನು ಕಂಡುಕೊಂಡು ಬೆಳೆವಣಿಗೆ ಹೊಂದಿದವು. ಅದರಲ್ಲಿ ಶೈವ ಧರ್ಮವು ಪ್ರಮುಖವಾದದ್ದು. ಶಾತವಾಹನ, ಕದಂಬ, ಗಂಗ, ರಾಷ್ಟ್ರಕೂಟ, ಬಾದಾಮಿ ಚಾಲುಕ್ಯ, ಕಲ್ಯಾಣ ಚಾಲುಕ್ಯ, ಕಲಚೂರಿ, ಹೊಯ್ಸಳರು ಹಾಗೂ ವಿಜಯನಗರದ ಅರಸರು ಇವರೆಲ್ಲರ ಆಳ್ವಿಕೆಯಲ್ಲಿಯೂ ಶೈವ ಧರ್ಮ ಮಾನ್ಯತೆ ಪಡೆದಿತ್ತೆಂಬುದನ್ನು ಇವರ ಶಾಸನಗಳು ಹಾಗೂ ಸ್ಮಾರಕಗಳ ಆಧಾರದ ಮೇಲೆ ಕಂಡುಕೊಳ್ಳಬಹುದು. ಪ್ರಾಚೀನ ಅರಸು ಮನೆತನವಾದ ಶಾತವಾಹನರ ಕಾಲದಿಂದಲೂ ಶೈವಧರ್ಮ ಕರ್ನಾಟಕದಲ್ಲಿತ್ತು ಎಂಬುದನ್ನು ಆಧಾರ ಸಮೇತ ಗುರುತಿಸಿದ್ದಾರೆ. ಶಾತವಾಹನ ಅರಸ ವಾಸಿಷ್ಠಿಪುತ್ರ ಪುಳುಮಾವಿಯ ಕಾಲಕ್ಕೆ ಸೇರಿದ 'ಮಹಾದೇವ ಚಂಡಶಿವನ ದೇವಾಲಯ'ವು ಇದುವರೆಗೆ ಕರ್ನಾಟಕದಲ್ಲಿ ದೊರೆತ ಅತ್ಯಂತ ಪ್ರಾಚೀನ ಶೈವ ದೇವಾಲಯವಾಗಿದೆ. ಇದು ಗದಗ ಜಿಲ್ಲೆಯ ನರಗುಂದ ತಾಲೂಕಿನ ವಾಸನ ಎಂಬ ಗ್ರಾಮದಲ್ಲಿದೆ. ಈ ದೇವಾಲಯದ ಉಲ್ಲೇಖವು ಕ್ರಿ.ಶ.ಸುಮಾರು ೨ನೇ ಶತಮಾನದ ಪೂರ್ವಾರ್ಧದ ಶಾತವಾಹನ ದೊರೆ ವಾಸಿಷ್ಠಿ ಪುತ್ರ ಪುಳುಮಾವಿಯ ಶಾಸನದಲಿ ಈ ರೀತಿಯಾಗಿದೆ :

ಸಿರಿ ಸಾತ ವಾ ಹಣ ರಿಞೋ ವಾಸಿರೀಪುತಸ ಸಿರಿ ಪುಳಮಾಬಿಸ.... ವಾಯತನ ವಾಸಿಸ ಮಹಾದೇವಸ ಚಂಡಸಿವಸ..... ಸಲವಥ ಕಿಸ .....ತೇತಿ.

ಈ ಪ್ರಾಕೃತ ಶಾಸನದಲ್ಲಿ ದೇವಾಯತನವಾಸಿ ಮಹಾದೇವ ಚಂಡಶಿವನ ಉಲ್ಲೇಖವಿದೆ.[೨೬] ಕ್ರಿ.ಶ.೧೯೮೦ರ ದಶಕದಲ್ಲಿ ಇಲ್ಲಿ ನಡೆಸಲಾದ ಉತ್ಖನನದಿಂದ ಶಾತವಾಹನರ ಕಾಲದ ಶಾಸನ ಹಾಗೂ ಉಲ್ಲೇಖಿತ ದೇವಾಲಯದ ತಳಪಾಯ ಮತ್ತು ಮೂರ್ತಿಶಿಲ್ಪಗಳು ದೊರಕಿದ್ದು ಇದನ್ನು ಚಂಡಿಶಿವನ ದೇವಾಲಯವೆಂದು ತರ್ಕಿಸಲಾಗಿದೆ. ಸಿಕ್ಕಿರುವ

ಅವಶೇಷಗಳು ಇಟ್ಟಿಗೆಯಿಂದ ರಚಿಸಲ್ಪಟ್ಟಿವೆ.[೨೬] ಇದು ಕರ್ನಾಟಕದಲ್ಲಿ ದೊರೆತ ಶಾತವಾಹನರ ಏಕಮಾತ್ರ ದೇವಾಲಯವಾಗಿದೆ. ಅಲ್ಲದೆ ಇವರ ಕಾಲದಲ್ಲಿ ಶೈವ ಧರ್ಮ ಪ್ರಚಲಿತದಲ್ಲಿತ್ತು ಎಂದು ಸಮರ್ಥಿಸಿಕೊಳ್ಳಲು ಪ್ರಥಮ ಆಕರವಾಗಿದೆ.

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಮಳವಳ್ಳಿ ಗ್ರಾಮದಲ್ಲಿ ದೊರೆತ ವಿಣ್ಣುಕಡ ಚುಟುಕುಲಾನಂದ ಸಾತಕರ್ಣಿಯ ಕ್ರಿ.ಶ.ಸುಮಾರು ೩ನೇ ಶತಮಾನದ ಶಾಸನವು ಈ ಭಗವಾನ್ 'ಮಳಪಳ್ಳಿ' ದೇವನ ಸ್ತುತಿಯೊಂದಿಗೆ ಆರಂಭವಾಗಿದೆ. ಈ ದೃಷ್ಟಿಯಿಂದ ಕದಂಬ ಪೂರ್ವಕಾಲದ ಒಂದು ಶಿವ ದೇವಾಲಯ 'ಮಳಪಳ್ಳಿ ದೇವ' ಎಂಬ ಹೆಸರಿಂದ ಶಿವಮೊಗ್ಗ ಜಿಲ್ಲೆಯ ಮಳವಳ್ಳಿಯಲ್ಲಿ ಕ್ರಿ.ಶ.ಸುಮಾರು ೩ನೆಯ ಶತಮಾನದಲ್ಲಿ ಅಸ್ತಿತ್ವದಲ್ಲಿತ್ತೆಂಬುದು ವಿಧಿತವಾಗುತ್ತದೆ.[೨೭]

ಈ ಮೇಲಿನ ಎರಡೂ ದೇವಾಲಯಗಳು ಇಟ್ಟಿಗೆಯಿಂದ ನಿರ್ಮಿತವಾಗಿದ್ದವುಗಳು. ಶಾಸನ ಸಮೇತ ದೇವಾಲಯಗಳು ಕಂಡುಬಂದಿರುವುದರಿಂದ ಇವು ಕ್ರಿ.ಶ.ಸುಮಾರು ೨ ಮತ್ತು ೩ನೇ ಶತಮಾನದಲ್ಲಿ ಪ್ರಚಲಿತದಲ್ಲಿದ್ದ ಶೈವ ಧರ್ಮ ಮತ್ತು ಶೈವ ವಾಸ್ತು ಸ್ವರೂಪದ ಮೇಲೆ ಬೆಳಕು ಚೆಲ್ಲುತ್ತವೆ.

ಕದಂಬರ ಆಳ್ವಿಕೆಯ ಕಾಲದಲ್ಲಿಯೂ ಶೈವಧರ್ಮ ಪ್ರಾಧಾನ್ಯತೆ ಪಡೆದಿತ್ತು ಎನ್ನಲು ಕದಂಬರ ಆಳ್ವಿಕೆಯ ಪ್ರದೇಶವಾದ ಶಿವಮೊಗ್ಗ ಜಿಲ್ಲೆಯ ತಾಳಗುಂದದಲ್ಲಿ ಶಿವ ದೇವಾಲಯ ವೊಂದು ದೊರಕಿದೆ. ಇಂದು ಈ ದೇವಾಲಯವನ್ನು ಪ್ರಣವೇಶ್ವರ ದೇವಾಲಯ ಎಂದು ಕರೆಯುತ್ತಾರೆ. ಈ ದೇವಾಲಯದ ಮುಂದೆ ಕಾಕುಸ್ಥವರ್ಮನ ತಾಳಗುಂದ ಶಿಲಾಸ್ತಂಭ ಶಾಸನವಿದೆ. ಕಾಕುಸ್ಥವರ್ಮನ ಪ್ರಶಸ್ತಿಯೇ ಈ ಶಾಸನದ ಮುಖ್ಯ ವಿಷಯವಾಗಿದ್ದರೂ ಅಲ್ಲಿ ಪ್ರಸ್ತಾಪಿತವಾಗಿರುವ ಕೆಲವು ವಿಷಯಗಳು ತಾಳಗುಂದದ ಶೈವ ಪರಂಪರೆಯ ಕೆಲವು ಪ್ರಮುಖ ಮಾಹಿತಿಗಳನ್ನು ಹೊರಗೆಡಹುತ್ತದೆ.

ಸಿದ್ಧಮ್ ನಮಶ್ಶಿವಾಯ|| ಜಯತಿ ವಿಶ್ವದೇವ ಸಂಘಾತ
ನಿಶ್ಚಿತೈಕ ಮೂರ್ತಿಸ್ಸನಾತನ್ನ ಸ್ಥಾನುರಿನ್ದು ರಶ್ಮಿವಚ್ಛು ರಿತದ್ಯುತಿಮಜ್ಜ ಟಾಭರಮಣ್ಡನಃ||

ಈ ಶಾಸನವು 'ಶಿವ'ನ ಸ್ತುತಿಯೊಂದಿಗೆ 'ನಮಶ್ಶಿವಾಯ' ಎಂಬ ಪಂಚಾಕ್ಷರೀ ಮಂತ್ರ ದಿಂದ ಪ್ರಾರಂಭವಾಗುತ್ತದೆ. ಹೀಗೆ ಶೈವಧರ್ಮದ ಪರಂಪರೆಯಲ್ಲಿ ಅತ್ಯಂತ ಮಹತ್ವದ ಸ್ಥಾನ ಪಡೆದ ಪಂಚಾಕ್ಷರೀ ಮಂತ್ರದಿಂದ ಪ್ರಾರಂಭಗೊಳ್ಳುವ ಶಾಸನಗಳಲ್ಲಿ ಕರ್ನಾಟಕದ ಇದು ಮೊದಲನೆಯ ಶಾಸನವಾಗಿದೆ. ಅಲ್ಲದೇ ಮುಂಚೆ ಸಾತಕರ್ಣಿ ಮುಂತಾದ ಅರಸರು ಈ ದೇವತೆಯನ್ನು ಪೂಜಿಸಿದ್ದರೆಂದು ಹೇಳಿರುವುದರಿಂದ ಇದರ ಪ್ರಾಚೀನತೆ ಕನಿಷ್ಠ

ಸಾತವಾಹನರ ಕಾಲಕ್ಕೆ ಹೋಗುತ್ತದೆ.[೫೯] ಹೀಗೆ ದೇವಾಲಯ ಸಂಸ್ಕೃತಿ, ಶೈವ ಧರ್ಮದ ಹಿನ್ನೆಲೆಯಲ್ಲಿ ಕದಂಬರ ಕಾಲದಲ್ಲಿ ಸಾಕಷ್ಟು ಬೆಳವಣಿಗೆಯಾಯಿತು ಎಂಬುದು ವಿಧಿತವಾಗುತ್ತದೆ. ಬನವಾಸಿ, ಬೊಳೆ, ಹಲಸಿ, ತಾಳಗುಂದ, ಅರವೇಲಂ ಮುಂತಾದೆಡೆಗಳಲ್ಲಿ ಶಿವಲಿಂಗವನ್ನು ಆರಾಧಿಸುವ ಪರಂಪರೆ ಪ್ರಬಲವಾಗಿತ್ತೆಂದು ಸೂಚಿಸುತ್ತವೆ.[೬೦] ಕದಂಬರ ನಂತರ ಬರುವ ಗಂಗರ ಕಾಲದಲ್ಲಿನ ಯಾವುದೇ ಶೈವ ಸ್ಮಾರಕಗಳು ಕಂಡುಬರುವುದಿಲ್ಲ. ಆದರೆ ಶಾಸನಗಳಲ್ಲಿ ಕೆಲವು ದೇವಾಲಯಗಳ ಹೆಸರುಗಳು ಉಲ್ಲೇಖಗೊಂಡರೂ ಅವು ಅಸ್ಪಷ್ಟ ಶಾಸನಗಳಾಗಿವೆ. ಆದ್ದರಿಂದ ಯಾವುದೇ ದೇವಾಲಯದ ಸ್ಪಷ್ಟ ಮಾಹಿತಿ ಲಭ್ಯವಾಗುವುದಿಲ್ಲವಾದರೂ ಶೈವ ಸಂಬಂಧಿ ವ್ಯಕ್ತಿನಾಮಗಳ ಉಲ್ಲೇಖಗಳ ಲಭ್ಯತೆಯಿಂದ ಗಂಗರು ಕೂಡಾ ಶೈವಾರಾಧಕರಾಗಿದ್ದರು ಎಂದು ಊಹಿಸಬಹುದು.

ನಂತರ ಬಂದಂತಹ ಬಾದಾಮಿ ಚಾಲುಕ್ಯರು ತಮ್ಮ ವಾಸ್ತುಶಿಲ್ಪ ಕೆತ್ತನೆಗಳಿಂದ ಕರ್ನಾಟಕದಲ್ಲಿ ಪ್ರಸಿದ್ಧಿಯನ್ನು ಪಡೆದರು. ಮೊದಲು ವೈಷ್ಣವ ಧರ್ಮವಲಂಬಿಗಳಾದರೂ ಅನಂತರದಲ್ಲಿ ಶೈವ ಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಿದುದು ಶಾಸನಗಳಿಂದ ಹಾಗೂ ಶಿವ ದೇವಾಲಯಗಳ ನಿರ್ಮಾಣದಿಂದ ತಿಳಿದುಬರುತ್ತದೆ. ಮೊಟ್ಟ ಮೊದಲು ಶಾಸನೋಕ್ತ ಉಲ್ಲೇಖವು ಒಂದನೆಯ ಪುಲಿಕೇಶಿಯ ಅಮ್ಮಿನಬಾವಿ ಶಾಸನದಲ್ಲಿದೆ. ಅರಸನು ಅಲ್ಲಿಯ ಕಲಿದೇವ ದೇವಾಲಯಕ್ಕೆ ದತ್ತಿ ನೀಡಿದ್ದನ್ನು ಹೇಳಿವೆ.[೬೧] ಒಂದನೇಯ ಪುಲಿಕೇಶಿಯ ನಂತರ ಬಂದಂತಹ ಮಂಗಳೇಶ, ವಿಕ್ರಮಾದಿತ್ಯ, ವಿನಯಾದಿತ್ಯ ಹಾಗೂ ವಿಜಯಾದಿತ್ಯನ ಕಾಲದಲ್ಲಿಯೂ ಶೈವ ಧಂದ ಬೆಳವಣಿಗೆ ಮುಂದುವರೆಯಿತು. ಇವರ ದೇವಾಲಯಗಳನ್ನು ಬಾದಾಮಿ, ಐಹೊಳೆ, ಪಟ್ಟದಕಲ್ಲು ಮಹಾಕೂಟಗಳಲ್ಲಿ ಕಾಣಬಹುದು. ಬಾದಾಮಿಯಲ್ಲಿ ಗುಹಾ ದೇವಾಲಯಗಳನ್ನು ನಿರ್ಮಿಸುವುದರ ಮೂಲಕ ಕರ್ನಾಟಕದಲ್ಲಿ ಗುಹಾಲಯಗಳನ್ನು ನಿರ್ಮಿಸಿದವರಲ್ಲಿ ಮೊದಲಿಗರು ಎಂಬ ಹೆಗ್ಗಳಿಕೆಗೆ ಪಾತ್ರರಾದರು. ಬಾದಾಮಿಯಲ್ಲಿ ಒಂದೇ ಬದಿಯಲ್ಲಿರುವ ನಾಲ್ಕು ಗುಹಾಲಯಗಳಲ್ಲಿ ಮೊದಲನೆಯದು ಶೈವ ಧರ್ಮಕ್ಕೆ ಸಂಬಂಧಿಸಿದೆ. ಎರಡನೇ ಗುಹಾಲಯವು ವೈಷ್ಣವ ಧರ್ಮದ್ದಾದರೂ ಅಲ್ಲಿನ ಕಂಬಗಳ ಮೇಲೆ ಶೈವ ಶಿಲ್ಪಗಳನ್ನು ಕೆತ್ತಲಾಗಿದೆ. ಐಹೊಳೆಯಲ್ಲಿರುವ ರಾವಳಫಡಿ ಗುಹಾಲಯವೆಂದು ಕರೆಯಲ್ಪಡುವ ಗುಹಾಲಯವು ಶೈವ ಗುಹಾಲಯವಾಗಿದೆ. ಬಾದಾಮಿಯಿಂದ ಸುಮಾರು ೧೨ ಕಿ.ಮೀ ದೂರದಲ್ಲಿರುವ ಮಹಾಕೂಟವು ಇವರ ಕಾಲದ ಪ್ರಮುಖ ಶೈವ ಕೇಂದ್ರವಾಗಿತ್ತೆಂದು ಹೇಳಬಹುದು. ಇಲ್ಲಿರುವ ಹೆಚ್ಚಿನ ದೇವಾಲಯಗಳು ಶೈವಧರ್ಮಕ್ಕೆ ಸಂಬಂಧಿಸಿದವುಗಳಾಗಿವೆ. ಸಂಗಮೇಶ್ವರ, ಮಹಾಕೂಟೇಶ್ವರ, ಮಲ್ಲಿಕಾರ್ಜುನ, ಕಾಲಕಾಲೇಶ್ವರ ದೇವಾಲಯಗಳು ಹಾಗೂ ವಿಷ್ಣುಪುಷ್ಕರಣಿಯಲ್ಲಿನ ಚತುರ್ಮುಖಲಿಂಗ ದೇವಾಲಯಗಳು ಇಲ್ಲಿರುವ ಪ್ರಮುಖ

ದೇವಾಲಯಗಳಾಗಿವೆ. ಅಲ್ಲದೇ ಇವರ ಕಾಲದಲ್ಲಿ ತ್ರಿಕೂಟ ದೇವಾಲಯಗಳ ನಿರ್ಮಾಣ ಆರಂಭಗೊಂಡಿತು. ಬಾದಾಮಿಯಲ್ಲಿನ ಜಂಬುಲಿಂಗ ದೇವಾಲಯವು ಕರ್ನಾಟಕದಲ್ಲಿ ಶೈವ ಹಿನ್ನೆಲೆಯ ಮೊದಲ ತ್ರೈಕೂಟ-ತ್ರೈಪುರುಷ ದೇವಾಲಯವಾಗಿದೆ. ಬಾದಾಮಿ ಚಾಲುಕ್ಯರ ವ್ಯಾಪಾರಿಗಳ ಪ್ರಮುಖ ಕೇಂದ್ರವಾದ ಹಾಗೂ 'ಚಾಲುಕ್ಯರ ವಾಸ್ತುಶಿಲ್ಪದ ತೊಟ್ಟಿಲು' ಎಂದೆನಿಸಿಕೊಂಡಿರುವ ಐಹೊಳೆಯಲ್ಲಿ ಸುಮಾರು ಒಂಬತ್ತು ದೇವಾಲಯಗಳು ಶೈವ ಧರ್ಮಕ್ಕೆ ಸಂಬಂಧಿಸಿದವಾಗಿವೆ. ಅವುಗಳೆಂದರೆ ತಾರಬಸಪ್ಪ, ಮಲ್ಲಿಕಾಜುರನ, ಹುಚ್ಚಪಯ್ಯ, ಗಳಗನಾಥ, ದೇವಾಲಯಗಳು ಹಾಗೂ ಹುಚ್ಚಿಮಲ್ಲಿ ಗುಡಿ, ಕೊಂತಿಗುಂಡಿ, ಚಿಕ್ಕಿಗುಡಿ. ಇವುಗಳು ಪ್ರಮುಖ ಶೈವ ದೇವಾಲಯಗಳಾಗಿವೆ. ಚಾಲುಕ್ಯರ ಕಲೆ ಮತ್ತು ವಾಸ್ತುಶಿಲ್ಪದ ಉಚ್ಛ್ರಾಯ ಸ್ಥಿತಿಯನ್ನು ಪಟ್ಟದಕಲ್ಲಿನಲ್ಲಿ ಕಾಣಬಹುದಾಗಿದೆ. ಚಾಲುಕ್ಯರ ಅನೇಕ ದೇವಾಲಯ ಗಳು ಇಲ್ಲಿ ನಿರ್ಮಾಣವಾಗಿದ್ದು ಅವುಗಳಲ್ಲಿ ಏಳು ಪ್ರಮುಖ ದೇವಾಲಯಗಳು ಶೈವ ಧರ್ಮಕ್ಕೆ ಸಂಬಂಧಿಸಿದ್ದಾಗಿವೆ. ಅವುಗಳು ಸಂಗಮೇಶ್ವರ, ವಿರೂಪಾಕ್ಷ, ಮಲ್ಲಿಕಾರ್ಜುನ, ಜಂಬುಲಿಂಗ, ಪಾಪನಾಥ ದೇವಾಲಯಗಳಾಗಿವೆ. ಈ ಎಲ್ಲ ದೇವಾಲಯಗಳ ನಿರ್ಮಾಣದ ಹಿನ್ನೆಲೆಯಲ್ಲಿ ಬಾದಾಮಿ ಚಾಲುಕ್ಯರು ಶೈವ ಧರ್ಮದ ಪ್ರಮುಖ ಆರಾಧಿಕರಾಗಿದ್ದರು ಎಂದು ಸ್ಪಷ್ಟವಾಗಿ ತಿಳಿದುಬರುತ್ತದೆ.

ಕರ್ನಾಟಕದಲ್ಲಿ ತಮ್ಮದೇ ಆದ ವಿಶಿಷ್ಟ ವಾಸ್ತುಶಿಲ್ಪರಚನೆಗೆ ಹೆಸರು ವಾಸಿಯಾದ ಹೊಯ್ಸಳರು ಸಹ ಶೈವ ಆರಾಧನೆಗೆ ಪ್ರೋತ್ಸಾಹ ನೀಡಿದ್ದರು ಎಂಬುದು ಅವರ ಕಾಲದಲ್ಲಿ ನಿರ್ಮಿತಗೊಂಡ ದೇವಾಲಯಗಳಿಂದ ಸ್ಪಷ್ಟವಾಗುತ್ತದೆ. ಇವರಿಂದ ನಿರ್ಮಿತವಾದ ದೇವಾಲಯಗಳು ಬೇಲೂರು ಹಳೇಬೀಡುಗಳಲ್ಲಿ ಪ್ರಮುಖವಾಗಿ ಕಂಡುರುತ್ತವೆ. ಪ್ರಮುಖವಾದ ಶೈವ ದೇವಾಲಯಗಳೆಂದರೆ ಹಳೇಬೀಡಿನ ಹೊಯ್ಸಳೇಶ್ವರ ಮತ್ತು ಕೇದಾರೇಶ್ವರ ದೇವಾಲಯಗಳು, ಅಮೃತಾಪುರದ ಅಮೃತೇಶ್ವರ ದೇವಾಲಯಗಳು. ಈ ಎಲ್ಲ ದೇವಾಲಯದ ನಿರ್ಮಾಣದ ಆಧಾರದ ಮೇಲೆ ಪ್ರಮುಖ ವೈಷ್ಣವ ಭಕ್ತರಾದ ಇವರು ಶೈವಾರಾಧನೆಗೂ ಅವಕಾಶ ನೀಡಿ ಅದರ ಬೆಳವಣಿಗೆಗೆ ಕಾರಣರಾದರು.

ಕಲ್ಯಾಣದ ಕಲಚೂರಿಗಳು ಸ್ಮಾರಕಕ್ಕಿಂತ ಸಾಹಿತ್ಯ ರಚನೆಗೆ ಹೆಚ್ಚು ಮಹತ್ವತೆ ನೀಡಿದ್ದರಿಂದ ಇವರ ಕಾಲದಲ್ಲಿನ ಶೈವ ಧರ್ಮವನ್ನು ಸಾಹಿತ್ಯಾಧಾರಗಳಿಂದ ಮಾತ್ರ ತಿಳಿಯಬಹುದು ಕಲಚೂರಿಗಳು ಶೈವ ಧರ್ಮದ ಪರಮ ಭಕ್ತರಾಗಿದ್ದರು. ಬಿಜ್ಜಳನ ಆಸ್ಥಾನದ ಮಂತ್ರಿಯಾಗಿದ್ದ ಬಸವಣ್ಣನವರು ವೀರಶೈವ ಧರ್ಮದ ಆರಾಧಕರಾಗಿದ್ದರಲ್ಲದೇ ಈ ಧರ್ಮವನ್ನು ಬೆಳೆಸಲು ಶ್ರಮಿಸಿದರು. ಸಾಮಾನ್ಯ ಜನರಿಗೆ ಅರ್ಥವಾಗುವಂತಹ ಭಾಷೆಯಲ್ಲಿ ವಚನಗಳನ್ನು ಹಾಡುವುದರ ಮೂಲಕ ವೀರಶೈವ ಧರ್ಮವನ್ನು ಹರಡುವಲ್ಲಿ ಯಶಸ್ವಿಯಾದರು.

ಇವರ ನಂತರ, ಇವರ ಅನೇಕ ಶರಣರು ವಚನಗಳ ಮೂಲಕ ವೀರಶೈವ ಧರ್ಮವನ್ನು ಪಸರಿಸುವ ಕಾರ್ಯವನ್ನು ಕೈಗೊಂಡರು. ಹೀಗೆ ಶೈವ ಧರ್ಮವು ವೀರಶೈವ ಪಂಥದ ಮೂಲಕ ಕಲಚೂರಿಗಳ ಕಾಲದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿ ಬೆಳೆಯಿತು. ಇಂದೂ ಕೂಡ ಈ ಪಂಥದ ಆರಾಧನೆ ಅಸ್ತಿತ್ವದಲ್ಲಿದೆ.

ಕರ್ನಾಟಕಕ್ಕೆ ಮುಸ್ಲಿಂರು ದಾಳಿ ಮಾಡಿದ ಸಂದರ್ಭದಲ್ಲಿ ಅವರನ್ನು ಸಮರ್ಥವಾಗಿ ಎದುರಿಸಿ ಕನ್ನಡನಾಡನ್ನು ಉಳಿಸಿಕೊಂಡ ಕೀರ್ತಿಗೆ ಪಾತ್ರರಾದ ವಿಜಯನಗರದ ಅರಸರು ಕೂಡ ಶೈವ ಧರ್ಮದ ಆರಾಧಕರಾಗಿದ್ದರು. ವಿಜಯನಗರದ ಅರಸರು ಧಾರ್ಮಿಕ ಸಹಿಷ್ಣುಗಳಾಗಿದ್ದರು. ಇವರ ಕಾಲದಲ್ಲಿ ಮೊದಲು ವೈಷ್ಣವ ಧರ್ಮಕ್ಕೆ ಹೆಚ್ಚು ಪ್ರೋತ್ಸಾಹ ದೊರೆತರೂ ಎರಡನೇ ದೇವರಾಯನ ಕಾಲದಲ್ಲಿ ಶೈವ ಧರ್ಮ ಪುನರುಜ್ಜೀವನ ಪಡೆಯಿತು. ಈತನ ದಂಡನಾಯಕನಾದ ಲಕ್ಕಣ್ಣ ದಂಡೇಶನು ವೀರಶೈವ ಧರ್ಮದ ಆರಾಧಕನಾಗಿದ್ದನು. ದೇವರಾಯನ ನಂತರ ಬಂದಂತಹ ಎಲ್ಲ ಅರಸರು ಶೈವಧರ್ಮಕ್ಕೆ ಪ್ರೋತ್ಸಾಹ ನೀಡಿದರು. ಶೈವ ಧರ್ಮಕ್ಕೆ ಪ್ರೋತ್ಸಾಹವಿತ್ತನು. ಇವರ ಕಾಲದ ಪ್ರಮುಖ ಶೈವ ದೇವಾಲಯಗಳೆಂದರೆ ಹಂಪಿಯ ವಿರೂಪಾಕ್ಷ ದೇವಾಲಯಗಳು ಲೇಪಾಕ್ಷಿಯ ವೀರೇಶ್ವರ ಅಥವಾ ಪಾಪನಾಥೇಶ್ವರ ದೇವಾಲಯಗಳು. ಹೀಗೆ ಪ್ರಾಚೀನ ಕಾಲದಿಂದಲೂ ವಿಜಯನಗರ ಅರಸರ ಕಾಲದವರೆಗೂ ಶೈವ ಧರ್ಮ ರಾಜಾಶ್ರಯ ಪಡೆದು ಬೆಳವಣಿಗೆ ಹೊಂದುತ್ತಾ ಬಂದಿತು. ಇಂದೂ ಕೂಡ ಕೆಲ ಬದಲಾವಣೆಗಳೊಂದಿಗೆ ಈ ಧರ್ಮವು ಅಸ್ತಿತ್ವದಲ್ಲಿದೆಯಲ್ಲದೆ ದೇಶದ ಪ್ರಮುಖ ಧರ್ಮ ಎಂದು ಗುರುತಿಸಿಕೊಂಡಿದೆ.

ಪ್ರಸ್ತುತ ಅಧ್ಯಯನವು 'ರೋಣ ತಾಲೂಕಿನ ಶೈವ ದೇವಾಲಯ' ಕುರಿತಾಗಿರುವುದರಿಂದ ಈ ತಾಲೂಕಿನ ಶೈವಧರ್ಮ ಹಾಗೂ ಅದಕ್ಕೆ ದೊರೆತ ಸ್ಥಾನ ಮಾನವನ್ನು ತಿಳಿಯುವುದು ಅಧ್ಯಯನದ ಉದ್ದೇಶಗಳಲ್ಲೊಂದಾಗಿದೆ.

ರೋಣ ತಾಲೂಕಿನಲ್ಲಿ ನಿರ್ಮಾಣಗೊಂಡ ದೇವಾಲಯಗಳಲ್ಲಿ ಅತಿ ಹೆಚ್ಚು ದೇವಾಲಯಗಳು ಶೈವ ದೇವಾಲಯಗಳೇ ಆಗಿವೆ. ಅಲ್ಲದೇ ಇಲ್ಲಿ ದೊರೆತ ಹೆಚ್ಚಿನ ಶಾಸನಗಳೂ ಕೂಡ ಶೈವ ಸಂಬಂಧಿ ಶಾಸನಗಳೇ ಆಗಿವೆ. ಆದ್ದರಿಂದ ಇಲ್ಲಿನ ಅಧಿಕ ಜನರು ಶೈವಾರಾಧಕರೇ ಆಗಿದ್ದು ಶೈವ ಧರ್ಮಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಿದ್ದರೆಂದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಕ್ರಿ.ಶ.೭ನೇ ಶತಮಾನದ ಶಾಸನವೊಂದು 'ರೋಣದ ಶಿವಾಲಯ' ಎಂಬ ಉಲ್ಲೇಖವನ್ನು ಹೊಂದಿದೆ. ಈ ಶಾಸನಧಾರದಿಂದ ಸುಮಾರು ೭ನೇ ಶತಮಾನದ ಶಾಸನವೊಂದು[೨] 'ರೋಣದ ಶಿವಾಲಯ' ಎಂಬ ಉಲ್ಲೇಖವನ್ನು ಹೊಂದಿದೆ.

ಈ ಶಾಸನಧಾರದಿಂದ ಸುಮಾರು ೭ನೇ ಶತಮಾಕ್ಕಿಂತ ಪೂರ್ವದಲ್ಲಿಯೇ ಶೈವ ಧರ್ಮ ಅಸ್ತಿತ್ವದಲ್ಲಿತ್ತೆಂದು ತಿಳಿದು ಬರುತ್ತದೆ. ಇಲ್ಲಿನ ಹೆಚ್ಚು ಶಾಸನಗಳು ಶೈವ ದೇವಾಲಯಗಳ ನಿರ್ಮಾಣ ಹಾಗೂ ಅವುಗಳಿಗೆ ನೀಡಿದ ದಾನ ದತ್ತಿಗಳ ಕುರಿತು ಪ್ರಸ್ತಾಪ ಮಾಡುತ್ತವೆ. ಶೈವ ದೇವಾಲಯ ನಿರ್ಮಾಣದ ಉಲ್ಲೇಖವನ್ನು ಹೊಂದಿರುವ ಹಲವು ಶಾಸನಗಳಲ್ಲಿ ಕೆಲವುಗಳನ್ನು ಈ ಮುಂದೆ ನೀಡಲಾಗಿದೆ.

ಕರಮಡಿಯಲ್ಲಿ ಕಲ್ಯಾಣ ಚಾಲುಕ್ಯರ ೧ನೇ ಸೋಮೇಶ್ವರನಿಗೆ ಸಂಬಂಧಿಸಿದ ಶಾಸನವೊಂದು[೩೩] 'ಬಬ್ಬಲೇಶ್ವರ' ದೇವಾಲಯದ ಅನ್ನಛತ್ರ ನಿರ್ವಹಣೆಗೆ ಗಂಗೆಯಜೀಯನಿಂದ ಭೂದಾನ ಹಾಗೂ ಹೇಮದಾನ ನೀಡಿದ ಉಲ್ಲೇಖವಿದೆ. ನರೇಗಲ್‌ನಲ್ಲಿ ಆರನೇ ವಿಕ್ರಮಾತ್ಯನ ಕಾಲದ ಶಾಸನ[೩೪]ವೊಂದು ಮಹಾಮಂಡಳೇಶ್ವರ ಬಮ್ಮರಸನು ನರೆಯಂಗಲ್‌ನಲ್ಲಿ ತಾನು ನಿರ್ಮಿಸಿದ ಬ್ರಹ್ಮೇಶ್ವರ ದೇವಾಲಯದ ಆರಾಧನೆಗೆ ಭೂದಾನವನ್ನು ಮತ್ತು ನಂದಾದೀಪಕ್ಕಾಗಿ ಎಣ್ಣೆಗಾನವನ್ನು ದಾನವಾಗಿ ನೀಡಿದ ಉಲ್ಲೇಖಗಳು ದೊರೆಯುತ್ತದೆ. ಕಾಳಕಪ್ಪನಗುಡ್ಡದಲ್ಲಿ ದೊರೆ ಕಲ್ಯಾಣ ಚಾಲುಕ್ಯ ಅರಸ ನಾಲ್ಕನೇ ಸೋಮೇಶ್ವರನ ಕಾಲದ ಶಾಸನವೊಂದು[೩೫] ಸಿಂದವಂಶದ ಆಚಿದೇವರಸನಿಂದ ಕಾಲಕಾಳೇಶ್ವರ ದೇವರಿಗೆ ಭೂದಾನ ನೀಡಿದ ಉಲ್ಲೇಖವನ್ನು ಹೊಂದಿದೆ. ರೋಣದಲ್ಲಿ ಒಂದನೇ ಜಗದೇಕಮಲ್ಲನ ಕಾಲಕ್ಕೆ ಸೇರಿದ ಶಾಸನವೊಂದು[೩೬] ದೊರೆತಿದ್ದು ಮಾಚಿಮಯ್ಯನು ತನ್ನ ಸಹೋದರನಾದ ಸಂಕಿಮಯ್ಯ ಕಟ್ಟಿಸಿದ ಮೂಲಸ್ತಾನ ದೇವಾಲಯಕ್ಕೆ ಭೂದಾನ ನೀಡಿದ ಉಲ್ಲೇಖವನ್ನು ಒಳಗೊಂಡಿದೆ. ಕೋಡಿಕೊಪ್ಪದಲ್ಲಿರುವ ಆರನೇ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ ಶಾಸನವೊಂದು[೩೭] ಮಹಾಮಂಡಳೇಶ್ವರ ಆಚರಸನಿಂದ ಕಿರುನರೆಯಂಗಲ್ಲದ ಮೊಲ್ಲೇಶ್ವರ ದೇವಾಲಯಕ್ಕೆ ಭೂದಾನ ನೀಡಿದ ಉಲ್ಲೇಖವನ್ನು ಹೊಂದಿದೆ.

ಈ ಮೇಲಿನ ಶಾಸನಗಳಲ್ಲದೆ ಇನ್ನೂ ನೂರಾರು ಶಾಸನಗಳು ಶೈವ ದೇವಾಲಯಗಳಿಗೆ ಸಂಬಂಧಿಸಿದ ವಿವರಗಳನ್ನು ಹೊಂದಿವೆ. ರೋಣ ತಾಲೂಕಿನಲ್ಲಿ ಹೆಚ್ಚಾಗಿ ರಾಷ್ಟ್ರಕೂಟ ಹಾಗೂ ಕಲ್ಯಾಣ ಚಾಲುಕ್ಯ ಕಾಲದಲ್ಲಿ ನಿರ್ಮಿತವಾದ ದೇವಾಲಯಗಳು ಕಂಡುಬರುತ್ತವೆ. ಇಲ್ಲಿ ದೊರೆತ ಅತ್ಯಂತ ಪ್ರಾಚೀನ ಶೈವ ದೇವಾಲಯವೆಂದರೆ ರಾಷ್ಟ್ರಕೂಟ ಕಾಲದ ರಾಜೂರಿನ ರಾಮಲಿಂಗೇಶ್ವರ ದೇವಾಲಯ. ಹಾಗೆಯೇ ನರೇಗಲ್, ರೋಣ, ಸವಡಿ, ಸೂಡಿಗಳಲ್ಲಿ ಇವರ ಶೈವ ದೇವಾಲಯಗಳು ಕಂಡುಬಂದಿವೆ. ಈ ಮೂಲಕ ರಾಷ್ಟ್ರಕೂಟ ಕಾಲದಲ್ಲಿ ರೋಣ ತಾಲೂಕಿನಲ್ಲಿ ಶೈವ ಧರ್ಮ ಹೆಚ್ಚು ಪ್ರೋತ್ಸಾಹವನ್ನು ಪಡೆದಿತ್ತು ಎಂದು ತಿಳಿಯಬಹುದು. ಗಮನಿಸಬೇಕಾದ ವಿಷಯವೆಂದರೆ ಇಲ್ಲಿ ದೊರೆತ ಎಲ್ಲ ರಾಷ್ಟ್ರಕೂಟ

ಶೈಲಿಯ ದೇವಾಲಯಗಳು ಶೈವ ದೇವಾಲಯಗಳೇ ಆಗಿವೆ. ಅಂತೆಯೇ ಕಲ್ಯಾಣ ಚಾಲುಕ್ಯ ಕಾಲದ ಶೈವ ದೇವಾಲಯಗಳು ರೋಣ ತಾಲೂಕಿನ ಎಲ್ಲೆಡೆಯೂ ಕಂಡುಬರುತ್ತವೆ. ಮುಖ್ಯವಾಗಿ ಸೂಡಿ ಗ್ರಾಮವು ಕಲ್ಯಾಣ ಚಾಲುಕ್ಯರ ವಾಸ್ತುಶಿಲ್ಪ ಕೆತ್ತನೆಗಳನ್ನೊಳಗೊಂಡ ಪ್ರಮುಖ ಗ್ರಾಮವಾಗಿದೆ. ಐದನೇ ವಿಕ್ರಮಾದಿತ್ಯನ ಸಹೋದರಿಯಾದ ಅಕ್ಕಾದೇವಿಯ ಕಿಸುಕಾಡು-೭೦ನ್ನು ಆಳುತ್ತಿದ್ದಾಗ ಸೂಡಿಯನ್ನು ರಾಜಧಾನಿಯನ್ನಾಗಿಸಿಕೊಂಡು ಆಳುತ್ತಿದ್ದಳು. ಈಕೆಯು ಶೈವ ಧರ್ಮದ ಪರಮ ಆರಾಧಕಗಳಾಗಿದ್ದಳು. ಇವರ ಫಲಪ್ರದವಾಗಿ ಸೂಡಿಯಲ್ಲಿ ಅಕ್ಕೇಶ್ವರ ದೇವಾಲಯ ನಿರ್ಮಾಣಗೊಂಡಿತು. ಸೂಡಿಯಲ್ಲಿಯೇ ದೊರೆತ ಒಂದನೇ ಸೋಮೇಶ್ವರನ ಶಾಸನವು[೩೮] ಅಕ್ಕಾದೇವಿಯು ಅಕ್ಕೆಶ್ ವರ ದೇವಾಲಯಕ್ಕೆ ನೀಡಿದ ಮರ್ಯಾದೆಯನ್ನು ಉಲ್ಲೇಖಿಸುತ್ತದೆ. ಇದರಿಂದ ಸೂಡಿಯಲ್ಲಿ ಅಕ್ಕಾದೇವಿಯ ಆಳ್ವಿಕೆಯಲ್ಲಿ ಶೈವಧರ್ಮ ಎಷ್ಟು ಪ್ರೋತ್ಸಾಹ ಪಡೆದಿತ್ತೆಂದು ತಿಳಿಯುತ್ತದೆ. ಅಲ್ಲದೆ ಇಲ್ಲಿರುವ ಇನ್ನೊಂದು ಶಾಸನವು[೩೯] ಮಹಾಸಾಮಂತಾಧಿಪತಿ ಮನೆವರ್ಗದ ದಂಡನಾಯಕ ನಾಗದೇವನಿಂದ ನಾಗೇಶ್ವರ ದೇವಾಲಯ ನಿರ್ಮಾಣ ಹಾಗೂ ದಾನದ ಉಲ್ಲೇಖವನ್ನು ಹೊಂದಿದೆ. ಹೀಗೆ ಸೂಡಿಯು ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಕಾಲದಲ್ಲಿ ಒಂದು ಪ್ರಮುಖ ಶೈವ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ.

ರೋಣ ಪ್ರದೇಶದಲ್ಲಿ ಏಕಕೂಟ, ದ್ವಿಕೂಟ ಹಾಗೂ ತ್ರಿಕೂಟ ರಚನೆಯ ಶೈವ ದೇವಾಲಯಗಳು ಕಂಡುಬರುತ್ತವೆ. ಏಕಕೂಟ ದೇವಾಲಯಗಳು ಸಾಮಾನ್ಯವಾಗಿದ್ದು, ರೋಣ ಮತ್ತು ಸೂಡಿಗಳಲ್ಲಿ ದ್ವಿಕೂಟ ದೇವಾಲಯಗಳು ಕಂಡುಬರುತ್ತವೆ. ತ್ರಿಕೂಟ ದೇವಾಲಯಗಳು ಕೊಡಗಾನೂರು, ನರೇಗಲ್, ನಿಡಗುಂಡಿ ಮತ್ತು ಸೂಡಿಗಳಲ್ಲಿಯೂ ಕಂಡುಬಂದಿದ್ದು ವಿಶೇಷವಾದ ಶಾಸನುಲ್ಲೇಖಿತ ತ್ರೈಪುರುಷ ದೇವಾಲಯಗಳು ಸವಡಿ ಮತ್ತು ನಿಡಗುಂದಿಗಳಲ್ಲಿ ಕಂಡುಬಂದಿವೆ. ನಿಡಗುಂದಿಯಲ್ಲಿ ದೊರೆತಿರುವ ಭುವನೈಕಮಲ್ಲ ಎರಡನೇ ಸೋಮೇಶ್ವರನ ಕಾಲದ ೨೮ ಸಾಲುಗಳುಳ್ಳ ಶಾಸನದಲ್ಲಿ[೪೦] ಕೊನೆಯ ಎರಡು ಸಾಲುಗಳು ಈ ತ್ರೈಪುರುಷ ದೇವಾಲಯದ ಬಗೆಗೆ ತಿಳಿಸುತ್ತವೆ.

> ೨೭ ಟ್ವಿವಳಯಂ ದಿಶಾ....... ತಟಗಳೇ ಕಗ್ಗಳ್ ಕುಳಪರ್ಬ್ಬತಂಗಳ ಮಹಾ
> ಕೂಟಂಗಳೆ........ಪ್ರನ್ನತಿಯನೆ ತಾಳ್ದಿತೋ... ಮೆಹೀತಳೆ
> ದಾಳ್|| ಜನ್ನಮ ಮಾಡಿಸಿದ ತ್ರಿಪುರಾಷಾವಾಸಂ(ಕ)ಳಾಸಾಸ್ಯ||ಕನ್ದ||
> ಅರ್ಷ್ಠೋಗಳಳವರೋ
> ಕಿಸುಕಾಡೆಪ್ಪತ್ತರಬಳಿಯ ಕಳ್ಳಮನಪಳ್ಳಿಯನಿತ್ತಾ
> ೨೮ (ರ್ಷಿ) ಜನ್ನಂ ಮಾಡಿಸಿ ನೋರ್ಪ್ಪಡೆ ನಿಡಗುಣ್ಡಿಯೊಳ್ ತ್ರಿಪುರುಷಾಲಯಮಂ||

ಈ ಶಾಸನವು ಕನ್ನಡ ಸಂಧಿವಿಗ್ರಹಾಧಿಪತಿ ಮಹಾಪ್ರಚಂಡ ದಂಡನಾಯಕನಾದ ಜನ್ನಮಯ್ಯನು ಅರಸನ ಸಮ್ಮತಿಯ ಮೇರೆಗೆ ಕಿಸುಕಾಡೆಪ್ಪತ್ತಕ್ಕೆ ಒಳಪಟ್ಟ ನಿಡಗುಂಡಿಯಲ್ಲಿ ತಾನು ನಿರ್ಮಿಸಿದ ತ್ರೈಪುರುಷ ದೇವಾಲಯಕ್ಕೆ ಕಲ್ಲಮನಪಳ್ಳಿ ಗ್ರಾಮವನ್ನು ದಾನ ನೀಡಿದ ವಿಷಯವನ್ನು ಪ್ರಸ್ತಾಪಿಸುತ್ತದೆ. ಹಾಗೆಯೇ ಸವಡಿಯಲ್ಲಿ ದೊರೆತ ಶಾಸನವು[೪೧] ೧೪ ಸಾಲುಗಳಿಂದ ಕೂಡಿದ್ದು ಕೊನೆಯ ಆರು ಸಾಲುಗಳಲ್ಲಿ ದೇವಾಲಯದ ಉಲ್ಲೇಖವಿದೆ.

೯ ರಕು ವಂಶದ ಬಾಗಿಲವಾಡದ

೧೦ ತಿಪಣ ನಾಯಕರು ಮಕ್ಕಳು ಚಲುಡ

೧೧ ಯ ನಾಯಕರು ಬಾದಾಮಿಯ ಸೀಮೆಯೊ

೧೨ ಳಗಣ (ಸೈ)ವಿಡಿಯ ತ್ರೈಮೂರ್ತಿಗ

೧೩ ಳಿಗೆ ಜೀರ್ನ ಉದಾರ ಸಮರ್ಪಣ

೧೪ ಮಂಗಳ ಮಹಾ ಶ್ರೀ ಶ್ರೀ(||)

ರೋಣ ತಾಲೂಕಿನ ತ್ರೈಪುರುಷ ದೇವಾಲಯಗಳು ಕಾಳಾಮುಖ ಶೈವ ಧರ್ಮದ ಪ್ರಮುಖ ಕೇಂದ್ರಗಳಾಗಿದ್ದು, ಘಟಿಕಾ ಸ್ಥಾನಗಳನ್ನು ನಡೆಸುತ್ತಿದ್ದವು. ಅಲ್ಲದೇ ಕಾಳಾಮುಖರು ದೇವಾಲಯ ನಿರ್ಮಾಣ ಹಾಗೂ ವಿದ್ಯಾದಾನ ನೀಡುವ ಘಟಿಕಾಸ್ಥಾನಗಳನ್ನು ನಡೆಸುವಂತಹ ಸಮಾಜೋಪಯೋಗ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.[೪೨] ಆದ್ದರಿಂದಲೇ ಶಾಸನಗಳಲ್ಲಿ ರೋಣವನ್ನು 'ಮಹಾ ಅಗ್ರಹಾರ ರೋಣ' ಎಂದು ಕರೆದಿರುವುದು. ಹೀಗೆ ಶೈವ ಧರ್ಮದ ಒಂದು ಪಂಥವಾದ ಕಾಳಾಮುಖರು ಹೆಚ್ಚು ಸಂಖ್ಯೆಯಲ್ಲಿದ್ದು ಸಮಾಜದಲ್ಲಿ ಒಂದು ಉನ್ನತ ಸ್ಥಾನಗಳಿಸಿದ್ದರೆಂಬುದನ್ನು ತಿಳಿಯಬಹುದು. ಅಲ್ಲದೇ ಶೈವ ಗುರುಗಳ ಹೆಸರುಗಳನುಳ್ಳ ಶಾಸನ ಉಲ್ಲೇಖಗಳು ಈ ಭಾಗದಲ್ಲಿ ಹೆಚ್ಚು ಕಂಡುಬರುತ್ತವೆ. ಉದಾ : ನರೇಗಲ್ಲದ ನೀಲಕಂಠಪಂಡಿತರು, ಅಬ್ಬಿಗೇರಿಯ ಮಲ್ಲಿಕಾರ್ಜುನ ಗುರುಗಳು, ಸವಡಿಯ ಚಂದ್ರ ಭೂಷಣಪಂಡಿತರು, ಕೋಡಿಕೊಪ್ಪದ ವಾಮಶಕ್ತಿಪಂಡಿತರು, ನಿಡುಗಂದಿಯ ಆಚಾರ್ಯ ಈಶಾನ್ಯ ಶಕ್ತಿದೇವರು, ರೋಣದ ಗುರುಭಕ್ತಿದೇವರು, ಸೂಡಿಯ ಮೂರ್ತಿ ಶಿವಾಚಾರ್ಯರು. ಹೀಗೆ ಸಾಕಷ್ಟು ಶೈವ ಗುರುಗಳ ಹೆಸರನ್ನುಲ್ಲೇಖಿತ ಶಾಸನಗಳು ದೊರೆಯುವುದರಿಂದ ರೋಣ ತಾಲೂಕಿನಲ್ಲಿ ಶೈವ ಧರ್ಮ ಎಷ್ಟು ಉಚ್ಛ್ರಾಯ ಸ್ಥಿತಿಯಲ್ಲಿ ತ್ತೆಂದು ತಿಳಿದುಬರುತ್ತದೆ.

ಈ ಮೇಲಿನ ಸಂಕ್ಷಿಪ್ತ ವಿವರಣೆಯಲ್ಲಿ ಶೈವಧರ್ಮವು ಭಾರತದಲ್ಲಿಯೇ ಅತ್ಯಂತ ಪ್ರಾಚೀನ ಹಾಗೂ ವ್ಯಾಪಕವಾಗಿ ಹರಡಿದ ಧರ್ಮವಾಗಿದ್ದು, ನಂತರದಲ್ಲಿ ಉದಿಸಿದ ಹಲವು

ಧರ್ಮಗಳ ಪೈಪೋಟಿಯ ನಡುವೆಯೂ ತನ್ನ ಸ್ಥಾನವನ್ನು ಉಳಿಸಿಕೊಂಡು ಬಂದಿದೆ ಎಂಬುದನ್ನು ತಿಳಿಯಬಹುದು. ಮುಖ್ಯವಾಗಿ ಈ ಧರ್ಮವು ಕರ್ನಾಟಕದಲ್ಲಿ ಹೆಚ್ಚು ಬೆಳವಣಿಗೆ ಹೊಂದಿರುವುದು ಕಂಡುಬರುತ್ತದೆ. ಅದರಲ್ಲೂ ರೋಣ ತಾಲೂಕು ಶೈವ ಧರ್ಮದ ಪ್ರಮುಖ ಕೇಂದ್ರವಾಗಿತ್ತು ಎಂಬುದು ಗಮನಿಸಬೇಕಾದ ವಿಷಯ. ಇಲ್ಲಿದ್ದ ಕಾಳಾಮುಖ ಪಂಥವು ಶೈವಧರ್ಮದ ಏಳ್ಗೆಗೆ ಕಾರಣವಾಯಿತೆನ್ನಬಹುದು. ಆದ್ದರಿಂದಲೇ ಈ ಪ್ರದೇಶದಲ್ಲಿ ಹೆಚ್ಚು ಶೈವದೇವಾಲಯಗಳು ಕಂಡುಬರುತ್ತವೆ. ಅಲ್ಲದೇ ಈ ದೇವಾಲಯಗಳು ಶೈವಧರ್ಮವನ್ನು ಬೆಳೆಸುವ ಹಾಗೂ ವಿಸ್ತರಿಸುವ ಕಾರ್ಯವನ್ನು ನಿರಂತರವಾಗಿ ನಡೆಸಿಕೊಂಡು ಬಂದಿರುವುದು ಇಲ್ಲಿ ದೊರೆತ ಶಾಸನಗಳಲ್ಲಿನ ಉಲ್ಲೇಖಗಳ ಮೂಲಕ ತಿಳಿಯಬಹುದು. ರೋಣ ತಾಲೂಕಿನಲ್ಲಿ ಕಂಡುಬರುವ ಎಲ್ಲ ಶೈವ ದೇವಾಲಯ ಗಳು ಹಾಗೂ ಅವುಗಳ ವಿವರಣೆಯನ್ನು ಮುಂದಿನ ಅಧ್ಯಾಯದಲ್ಲಿ ಒದಗಿಸಲಾಗಿದೆ.

**ಅಡಿಟಿಪ್ಪಣಿಗಳು**

೧. ಕಡಪಟ್ಟಿ ಎಂ.ಎನ್., **ಪ್ರಾಚೀನ ಕರ್ನಾಟಕದಲ್ಲಿ ಶೈವಧರ್ಮ,** ಪು.೯

೨. **ಅದೇ,** ಪು.೯–೧೦

೩. **ಅದೇ,** ಪು.೧೦

೪. **ಅದೇ,** ಪು.೧೦–೧೧

೫. Sarma I.K., **The Development of Early Art and Architecture,** Pp.11

೬. **ಅದೇ,** ಪು.೧೧

೭. **ಅದೇ,** ಪು.೧೫

೮. **ಅದೇ,** ಪು.೧೬

೯. **ಅದೇ,** ಪು.೧೨೮

೧೦. **ಅದೇ,** ಪು.೧೨೮–೧೨೯ ಮತ್ತು ವಾಸುದೇವನ್ ಸಿ.ಎಸ್., *ಹಂಪಿ ಪರಿಸರದ ಪಂಚಲಿಂಗಗಳು,* **ವಿಜಯನಗರ ಅಧ್ಯಯನ**

೧೧. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪು.೧೩೯

೧೨. ಅದೇ, ಪು.೧೪೦

೧೩. ಕಡಪಟ್ಟಿ ಎಂ.ಎನ್., **ಪೂರ್ವೋಕ್ತ,** ಪು.೨೦೪

೧೪. ಅದೇ, ಪು.೪೧

೧೫. Sarma I.K., **Ibid**, Pp.39

೧೬. ಕಡಪಟ್ಟಿ, ಎಂ.ಎನ್. **ಪೂರ್ವೋಕ್ತ**, ಪು.೭೮

೧೭. Sarma I.K., **Ibid**, Pp.111-112

೧೮. ಕಡಪಟ್ಟಿ ಎಂ.ಎನ್. **ಪೂರ್ವೋಕ್ತ**, ಪು.೩೫

೧೯. ಅದೇ, ಪು.೪೦

೨೦. Sarma I.K., **Ibid**, Pp.146-147

೨೧. ನಂದೀಮಠ ಎಸ್.ಸಿ., **ಕನ್ನಡ ನಾಡಿನ ಚರಿತ್ರೆ : ಕರ್ನಾಟಕದ ಧರ್ಮಗಳು, ಎರಡನೆಯ ಭಾಗ**, ಪು.೩೪–೩೫

೨೨. ಕಡಪಟ್ಟಿ ಎಂ.ಎನ್., **ಪೂರ್ವೋಕ್ತ**, ಪು.೮೪

೨೩. ಅದೇ, ಪು.೮೪–೮೫

೨೪. ಅದೇ, ಪು.೧೨೫

೨೫. ಗೋಪಾಲರಾವ್ ಎಚ್.ಎಸ್., **ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯ ದೇವಾಲಯಗಳು: ಒಂದು ಸಾಂಸ್ಕೃತಿಕ ಅಧ್ಯಯನ**, ಪು.೧೮೮

೨೬. ಕಡಪಟ್ಟಿ ಎಂ.ಎನ್., **ಪೂರ್ವೋಕ್ತ**, ಪು.೩೩

೨೭. ಬಾಲಸುಬ್ರಮಣ್ಯ, ವಾಸುದೇವನ್ ಸಿ.ಎಸ್., ಮತ್ತು ರಮೇಶನಾಯಕ, **ಕರ್ನಾಟಕ ದೇವಾಲಯ ಕೋಶ: ಗದಗ ಜಿಲ್ಲೆ**, ಪು.೧೬

೨೮. ಕಡಪಟ್ಟಿ ಎಂ.ಎನ್., **ಪೂರ್ವೋಕ್ತ**, ಪು.೩೩

೨೯. ಅದೇ, ಪು.೪೬–೪೭

೩೦. ಅದೇ, ಪು.೫೨

೩೧. ಈರಣ್ಣ ಕೆ.ಪಿ., **ಬಾದಾಮಿ ಚಾಲುಕ್ಯರ ಸಾಂಸ್ಕೃತಿಕ ಪರಂಪರೆ**, ಪು.೧೧೪

೩೨. SII XV, No.447

೩೩. **Ibid**, XV, No.1

೩೪. **Ibid**, XI-II, No.155

೩೫. **Ibid,** XV, No.74

೩೬. **Ibid,** XI-i, No.59

೩೭. **Ibid,** XI-ii, No.170

೩೮. **Ibid,** XI-i, No.93

೩೯. **Ibid,** XI-i, No.95

೪೦. **Ibid,** XV, No.2

೪೧. **Ibid,** XV, No.246

೪೨. ಗೋಪಾಲ ಆರ್.(ಸಂ), ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.೪೧೪

೪

# ರೋಣ ತಾಲೂಕಿನ ಶೈವ ದೇವಾಲಯಗಳು

## ೧. ರಾಮಲಿಂಗೇಶ್ವರ ದೇವಾಲಯ

ತಾಲೂಕಿನಲ್ಲಿಯೇ ಅತಿ ಪ್ರಾಚೀನವೆಂದು ಹೇಳಬಹುದಾದ ರಾಜೂರಿನ ರಾಮಲಿಂಗೇಶ್ವರ[೧] ದೇವಾಲಯವು ಗ್ರಾಮದ ಆಗ್ನೇಯಕ್ಕಿದ್ದು ೯-೧೦ನೇ ಶತಮಾನಕ್ಕೆ ಸೇರಿದುದಾಗಿದೆ. ಪೂರ್ವಾಭಿಮುಖವಾಗಿರುವ ಹಾಗೂ ರಾಷ್ಟ್ರಕೂಟ ಕಲಾ ರಚನೆಯ ಲಕ್ಷಣಗಳನ್ನು ಹೊಂದಿರುವ ಈ ದೇವಾಲಯವು ಭಗ್ನಾವಸ್ಥೆಯಲ್ಲಿದೆ. ಉತ್ತರ ಕರ್ನಾಟಕದಲ್ಲಿ ಸಿಗುವ ಹಾಗೂ ರಾಷ್ಟ್ರಕೂಟ ಪ್ರಾರಂಭದ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳಲ್ಲಿ ರಾಜೂರಿನ ರಾಮಲಿಂಗೇಶ್ವರ ದೇವಾಲಯ ಕೂಡಾ ಒಂದು ಚೌಕಾಕಾರದ ತಲವಿನ್ಯಾಸವನ್ನು ಒಳಗೊಂಡ ದೇವಾಲಯವು ತಿರ್ಯಙ್ಮ ಕ್ರಮದಲ್ಲಿ ಗರ್ಭಗೃಹ, ತೆರೆದ ಅಂತರಾಳ ಹಾಗೂ ಭಾಗಶಃ ನಾಶವಾಗಿರುವ ನವರಂಗದ ಭಾಗಗಳನ್ನು ಒಳಗೊಂಡಿದೆ. ದೇವಾಲಯಕ್ಕಿರುವ ಪ್ರಾರಂಭದ ಪ್ರವೇಶ ದ್ವಾರವು ಸಹ ಹಾಳಾಗಿದ್ದು ಸದ್ಯ ಉತ್ತರಕ್ಕೆ ಮುಖ ಮಾಡಿದ ಇನ್ನೊಂದು ಪ್ರವೇಶ ದ್ವಾರವನ್ನು ನಿರ್ಮಿಸಲಾಗಿದೆ.

ಗರ್ಭಗೃಹದಲ್ಲಿ ಚೌಕಾಕಾರದ ಪೀಠದ ಮೇಲೆ ವೃತ್ತಾಕಾರದ ರುದ್ರಭಾಗವುಳ್ಳ ಲಿಂಗವಿದೆ. ಪಂಚಪಟ್ಟಿಕೆಯನ್ನೊಳಗೊಂಡ ಬಾಗಿಲವಾಡದ ಲಲಾಟದಲ್ಲಿ ಗಜಲಕ್ಷ್ಮಿ ಉಬ್ಬುಶಿಲ್ಪ ಇರುವುದು. ಅಲ್ಲದೆ ದ್ವಾರಪಾಲಕ ಉಬ್ಬುಶಿಲ್ಪಗಳು ಇದೇ ಬಾಗಿಲವಾಡದಲ್ಲಿದೆ. ತೆರೆದ ಅಂತರಾಳದಲ್ಲಿ ನಂದಿ ವಿಗ್ರಹವನ್ನಿಡಲಾಗಿದೆ. ಭಾಗಶಃ ನಾಶಗೊಂಡ ನವರಂಗದಲ್ಲಿನ ಒಳಗೋಡೆಯಲ್ಲಿ ಅರ್ಧಕಂಬಗಳನ್ನು ಕಾಣಬಹುದು. ದೇವಾಲಯದ ಅಧಿಷ್ಠಾನವು ಉಪಾನ, ಕಂಪಿ, ಕಪೋತಗಳ ಭಾಗಗಳನ್ನು ಒಳಗೊಂಡಿದ್ದು ದೇವಾಲಯದ ಹೊರಗೋಡೆಯು ಧಕ್ಕೆಗೆ ಒಳಗಾಗಿದೆ. ಚಿಕ್ಕ ಮಂಟಪಗಳನ್ನು ಗೋಡೆಯ ಭಾಗದಲ್ಲಿ ಚಿತ್ರಿಸಿದ್ದು ಅವುಗಳ ಮೇಲೆ ಶಿಖರವನ್ನು ಸಹ ಮೂಡಿಸಿದ್ದಾರೆ. ದ್ರಾವಿಡ ಮಾದರಿಯ ಶಿಖರ ಇದಾಗಿದೆ. ಆದರೆ ಮುಖ್ಯ ದೇವಾಲಯದ ಶಿಖರ ಭಾಗವು ನಾಶವಾಗಿದೆ.

ರಾಷ್ಟ್ರಕೂಟರ ಕಾಲದ ಯಾವ ಶಾಸನಗಳು ರಾಜೂರಿನಲ್ಲಿ ಸಿಕ್ಕಿಲ್ಲ. ಆದರೆ ಕಲ್ಯಾಣ ಚಾಲುಕ್ಯ ಕಾಲದ ಎರಡು ಶಾಸನಗಳು[೨] ಗ್ರಾಮಕ್ಕೆ ಸಂಬಂಧಿಸಿದಂತೆ ಪ್ರಕಟವಾಗಿವೆ. ಕ್ರಿ.ಶ.೧೦೩೩ರ ತೇದಿವುಳ್ಳ ಎರಡನೆಯ ಜಯಸಿಂಹನ ಶಾಸನವು ಜೋಗಗಾವುಂಡನಿಂದ ಕಿಸುಕಾಡು-೭೦ರ ರಾಜೂರು ಗ್ರಾಮದಲ್ಲಿ ಗವರೇಶ್ವರ ದೇವಾಲಯದ ನಿರ್ಮಾಣ ಹಾಗೂ ದಾನ ನೀಡಿರುವ ಉಲ್ಲೇಖವನ್ನು ಹೊಂದಿದೆ. ಆದರೆ ಗವರೇಶ್ವರ ಎಂಬ ದೇವಾಲಯ ರಾಜೂರಿನಲ್ಲಿ ದೊರಕಿಲ್ಲ. ಇನ್ನೊಂದು ಶಾಸನವು ಕ್ರಿ.ಶ.೧೧೪೪ರ ತೇದಿಯುಳ್ಳದಾಗಿದ್ದು, ಹೆಗ್ಗಡೆ ಬಲದೇವಯ್ಯನಾಯಕನೆಂಬುವನು ಕೊಂಟಿಗೆ (ಕೋಟು ಉಮ್ಮಚಗಿ ಆಗಿರಬಹುದು) ಮತ್ತು ರಾಜೂರಿನ ರಾಣಿಗಳ ಪನ್ನಾಯ ಸುಂಕವನ್ನು ರಾಜೂರು ಗ್ರಾಮದ ಮೂಲಸ್ಥಾನ ದೇವರ ನಿತ್ಯನಿರ್ವಹಣೆಗಾಗಿ ಬಿಟ್ಟಿರುವ ಉಲ್ಲೇಖವಿದೆ.

೨. ಸೋಮೇಶ್ವರ ದೇವಾಲಯ ಅಥವಾ ನಾರಾಯಣ ದೇವಾಲಯ

ಸೋಮೇಶ್ವರ[೩] ದೇವಾಲಯ, ನಾರಾಯಣ ದೇವಾಲಯ ಹಾಗೂ ಬಸದಿ ಎಂಬ ವಿವಿಧ ಹೆಸರುಗಳಿಂದ ಕರೆಯಲ್ಪಡುವ ನರೇಗಲ್ಲ ಗ್ರಾಮದಲ್ಲಿರುವ ಈ ದೇವಾಲಯವು ೧೦ನೇ ಶತಮಾನಕ್ಕೆ ಒಳಪಡುವ ರಾಷ್ಟ್ರಕೂಟ ಶೈಲಿಯಲ್ಲಿ ನಿರ್ಮಾಣವಾಗಿದೆ. ನೋಡಲು ಆಕರ್ಷಕವಾದ ಈ ದೇವಾಲಯವು ಉತ್ತರಾಭಿಮುಖವಾಗಿದ್ದು, ಕರ್ನಾಟಕದಲ್ಲಿನ ರಾಷ್ಟ್ರಕೂಟ ಕಾಲದ ಒಂದು ದೊಡ್ಡ ದೇವಾಲಯವಾಗಿದೆ. ವಿಶಿಷ್ಟ ತಲವಿನ್ಯಾಸವುಳ್ಳ ಈ ದೇವಾಲಯವು ಗರ್ಭಗೃಹ, ತೆರೆದ ಅಂತರಾಳ, ಇವುಗಳನ್ನೊಳಗೊಂಡಂತೆ ನವರಂಗ ಹಾಗೂ ವಿಶಾಲವಾದ ಸಭಾಮಂಟಪ, ಅದರ ಇಕ್ಕೆಲಗಳಲ್ಲಿ ಆಯತಾಕಾರದ ಎರಡು ಗರ್ಭಗೃಹಗಳನ್ನೂ ಒಳಗೊಂಡ ತ್ರಿಕೂಟ ದೇವಾಲಯವಾಗಿದೆ.

ಪ್ರಧಾನ ಗರ್ಭಗೃಹವು ಚೌಕಾಕಾರದ ಪೀಠವುಳ್ಳ ಲಿಂಗವನ್ನು ಹೊಂದಿದ್ದು, ಸುಂದರ ಅಲಂಕೃತ ಭುವನೇಶ್ವರಿಯ ಕೆತ್ತನೆಯನ್ನು ಒಳಗೊಂಡಿದೆ. ಅಲ್ಲದೆ ಇದರ ಬಾಗಿಲವಾಡವು ತ್ರಿಪಟ್ಟಿಕೆಯಿಂದ ಕೂಡಿದ್ದು ತೆರದ ಅಂತರಾಳ ಭಾಗದಲ್ಲಿ ನಂದಿ ವಿಗ್ರಹವನ್ನು ಇರಿಸಲಾಗಿದೆ. ವಿಶಾಲವಾದ ನವರಂಗವು ನಾಲ್ಕು ಕಂಬಗಳನ್ನೊಳಗೊಂಡ ಎತ್ತರದ ಕಟ್ಟೆಯನ್ನು ಹೊಂದಿದ್ದು, ಒಳ ಮೇಲ್ಛಾವಣಿಯಲ್ಲಿ ಸುಂದರ ಕೆತ್ತನೆಯುಳ್ಳ ಭುವನೇಶ್ವರಿಯ ಅಲಂಕರಣೆಯನ್ನೊಳಗೊಂಡಿದೆ. ಇಲ್ಲಿರುವ ಕಂಬಗಳು ಬುಡದಲ್ಲಿ ಚೌಕಾಕಾರದ, ಮಧ್ಯದಲ್ಲಿ ಗಂಟೆಯಾಕಾರದ ಕೆತ್ತನೆಯಿಂದ ಕೂಡಿದ ಹಾಗೂ ಮೆಲ್ಭಾಗದಲ್ಲಿ ತಿರುಗುಣಿಯ ಆಕಾರವನ್ನು ಹೊಂದಿವೆ. ಅಲ್ಲದೆ ತಟ್ಟೆಯಾಕಾರದ ಫಲಕ ಹಾಗೂ ಬೋದಿಗೆಗಳ ಜೋಡಣೆಯನ್ನು ಒಳಗೊಂಡಿವೆ. ಇದರ ಬಾಗಿಲವಾಡವು ಪಂಚಪಟ್ಟಿಕೆಯಿಂದ ಕೂಡಿದೆ. ಸಭಾಮಂಟಪದ

ಭಾಗವೂ ವಿಶಾಲವಾಗಿದ್ದು, ಎರಡು ಕೋಷ್ಠಗಳನ್ನು ಒಳಗೊಂಡಿದೆ. ಈ ಕೋಷ್ಠಗಳ ಶಿಖರಗಳನ್ನು ನಾಗರಶೈಲಿಯ ಸುಂದರ ಕೆತ್ತನೆಗಳಿಂದ ಅಲಂಕೃತಗೊಳಿಸಲಾಗಿದೆ. ಈ ಶಿಖರಗಳ ಕೊನೆಯಲ್ಲಿ ಸ್ತೂಪಿ ಹಾಗೂ ಕಲಶದ ಭಾಗಗಳನ್ನು ಹೊಂದಿವೆ. ಆದರೆ ಈ ಕೊಷ್ಠಗಳು ಯಾವುದೇ ಶಿಲ್ಪಗಳಿಲ್ಲದೆ ಬರಿದಾಗಿವೆ. ಈ ಸಭಾಮಂಟಪವು ಸುಮಾರು ಹದಿನೆಂಟು ನಕ್ಷತ್ರಾಕಾರದ ಕಂಬಗಳನ್ನು ಹಾಗೂ ಉಳಿದಂತೆ ಗೋಡೆಗಂಬಗಳನ್ನು ಹೊಂದಿದೆ. ಇಲ್ಲಿಯೂ ಕೂಡಾ ಮಧ್ಯದ ನಾಲ್ಕು ಕಂಬಗಳನ್ನೊಳಗೊಂಡಂತೆ ಎತ್ತರದ ಕಟ್ಟೆಯನ್ನು ನಿರ್ಮಿಸಲಾಗಿದೆ. ಸಭಾಮಂಟಪದ ಇಕ್ಕೆಲಗಳಲ್ಲಿ ಎರಡು ಆಯತಾಕಾರದ ಗರ್ಭಗೃಹಗಳಿವೆ. ಇವುಗಳನ್ನು ಪ್ರತ್ಯೇಕ ಗರ್ಭಗೃಹಗಳೆಂದು ಪರಿಗಣಿಸಿದರೆ ಇದೊಂದು ವಿಶಿಷ್ಟ ತಲವಿನ್ಯಾಸವುಳ್ಳ ತ್ರಿಕೂಟ ದೇವಾಲಯಗಳಲ್ಲೊಂದಾಗುತ್ತದೆ. ಕಾರಣ ಕರ್ನಾಟಕದಲ್ಲಿ ದೇವಾಲಯದ ಮುಖ್ಯ ಗರ್ಭಗೃಹ ಪ್ರತ್ಯೇಕವಾಗಿದ್ದು, ಉಳಿದೆರಡು ಗರ್ಭಗೃಹಗಳು ಸಭಾಮಂಟಪಗಳನ್ನು ಒಳಗೊಂಡು ರಚನೆಯಾಗಿರುವುದು ವಿಶಿಷ್ಟವಾದುದು. ಪ್ರಸ್ತುತ ಎರಡೂ ಗರ್ಭಗೃಹಗಳಲ್ಲಿ ಇಡೀ ಗರ್ಭಗೃಹಗಳನ್ನಾವರಿಸಿದ ನಕ್ಷತ್ರಾಕಾರದ ಉದ್ದನೆಯ ಪೀಠದ ಮೇಲೆ ಲಕ್ಷ್ಮೀನಾರಾಯಣರ ಹಾಗೂ ಚೌಕಾಕಾರದ ಪೀಠವುಳ್ಳ ಲಿಂಗವನ್ನಿಡಲಾಗಿದೆ. ಆದರೆ ಈ ಉದ್ದವಾದ ಪೀಠಗಳು ಇಪ್ಪತ್ತನಾಲ್ಕು ರಂಧ್ರಗಳನ್ನು ಹೊಂದಿವೆ. ಆದ್ದರಿಂದ ದೇವಾಲಯವು ಈ ಮೊದಲು ಜೈನ ಬಸದಿಯಾಗಿತ್ತೆಂದು, ಶಾಸನ ಹಾಗೂ ವಿದ್ವಾಂಸರ ಹೇಳಿಕೆಯನ್ನು ಸ್ಪಷ್ಟಪಡಿಸುತ್ತವೆ. ಪ್ರತಿ ರಂಧ್ರಗಳಲ್ಲೂ ತೀರ್ಥಂಕರರ ಶಿಲ್ಪಗಳನ್ನು ಸ್ಥಾಪಿಸಲಾಗಿತ್ತೆಂಬುದನ್ನು ಊಹಿಸಬಹುದು. ಕಾಲಾನಂತರದಲ್ಲಿ ಪ್ರಾಚೀನ ಬಸದಿಯು ಬದಲಾವಣೆಗೊಂಡ ದೇವಾಲಯವಾಗಿದೆ. ಈ ಗರ್ಭಗೃಹಗಳಿಗೆ ಗಾಳಿ, ಬೆಳಕು ಬರಲು ಜಾಲಾಂಧ್ರಗಳನ್ನು ಸಹ ಅಳವಡಿಸಲಾಗಿದೆ. ಇವುಗಳ ಬಾಗಿಲವಾಡಗಳು ಪಂಚಪಟ್ಟಿಕೆಯ, ಸುಂದರ ಕೆತ್ತನೆಯಿಂದ ಕೂಡಿವೆ. ದೇವಾಲಯದ ಅಧಿಷ್ಠಾನ ಮುಚ್ಚಿಹೋಗಿದ್ದು ಶಿಖರ ಭಾಗವೂ ನಾಶಹೊಂದಿದೆ. ಅದರ ಇದಕ್ಕೂ ಮೊದಲ ಅಧ್ಯಯನ ನಡೆಸಿದ ವಿದ್ವಾಂಸರು 'ದೇವಾಲಯಕ್ಕೆ ಶಿಖರವಿದ್ದು, ಮೂರು ತಲಗಳಲ್ಲಿರುವ ಶಿಖರವು ಸುಕನಾಸಿಯನ್ನು ಹೊಂದಿದ್ದಲ್ಲದೆ ಕಲಶ, ಸ್ಥೂಪಿ ಹಾಗೂ ಪ್ರತಿತಲದಲ್ಲಿ ಶಿಲಾಫಲಕಗಳನ್ನು ಅಳಪಡಿಸಲಾಗಿದೆ ಎಂದು ತಿಳಿಸಿದ್ದಾರೆ.

ಈ ಮೇಲೆ ಹೇಳಿದ ಹಾಗೇ ದೇವಾಲಯವನ್ನು ಕಟ್ಟಿಸಿರುವ ಬಗೆಗೆ ಸ್ಪಷ್ಟವಾದ ಶಾಸನ[೪] ಆಧಾರಗಳಿವೆ. ರಾಷ್ಟ್ರಕೂಟ ಮೂರನೇ ಕೃಷ್ಣನ ಸಾಮಂತ ಗಂಗರಸ ಎರಡನೇ ಮಾತುಗನ ರಾಣಿ ಪದ್ಮಬ್ಬರಸಿಯಿಂದ ಈ ಬಸದಿ ನಿರ್ಮಾಣವಾಗಿದೆ. ಹಾಗೆ ಅವರು

ದಾನ ನೀಡಿರುವ ಖಚಿತ ಮಾಹಿತಿ ಇದೆ. ಕ್ರಿ.ಶ.೯೪೦ರ ಮೂರು ಶಾಸನಗಳು.[೫] ಬ್ರಹ್ಮೇಶ್ವರ ರೇವಣಸಿದ್ದೇಶ್ವರ ಹಾಗೂ ಕೇದಾರ ದೇವರುಗಳ ಬಗೆಗೆ ಉಲ್ಲೇಖವನ್ನು ಹೊಂದಿವೆ. ಕ್ರಿ.ಶ.೧೧೦೫ರ ತೇದಿಯ ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ಕಾಲದ ಶಾಸನ ಮಹಾಮಂಡಳೇಶ್ವರ ಬ್ರಹ್ಮರಸನು ಬ್ರಹ್ಮೇಶ್ವರ ದೇವರನ್ನು ಪ್ರತಿಷ್ಠಾಪಿಸಿ ಭೂಮಿಯನ್ನು ದಾನ ಮಾಡಿರುವುದನ್ನು ತಿಳಿಸುತ್ತದೆ. ಕ್ರಿ.ಶ.೧೧೮೩ರ ತೇದಿಯ ಶಾಸನವು ರೇವಣೇಶ್ವರ ದೇವಾಲಯಕ್ಕೆ ಸುವರ್ಣದಾನ ನೀಡಿರುವ ಮಾಹಿತಿಯನ್ನು ಒಳಗೊಂಡಿದ್ದರೆ, ಕ್ರಿ.ಶ.೧೧೮೦ರ ತೇದಿಯ ಶಾಸನವು ಮಹಾಪ್ರಧಾನ ಕೇಶವಯ್ಯನಿಂದ ಕೇದಾರ ದೇವಾಲಯಕ್ಕೆ ಭೂದಾನ ಮಾಡಿರುವ ಉಲ್ಲೇಖವನ್ನೊಳಗೊಂಡಿದೆ. ಆದರೆ ಮೇಲಿನ ಶಾಸನಗಳಲ್ಲಿ ಉಲ್ಲೇಖವಾಗಿರುವ ಪ್ರಾಚೀನ ದೇವಾಲಯಗಳಲ್ಲಿ ಇಂದು ಯಾವುದೇ ದೇವಾಲಯ ಕಂಡುಬರುತ್ತಿಲ್ಲ.

## ೩. ಸೋಮೇಶ್ವರ ದೇವಾಲಯ

೧೦-೧೧ನೇ ಶತಮಾನಕ್ಕೆ ಸೇರಿದ ರೋಣದ ಸೋಮೇಶ್ವರ[೬] ದೇವಾಲಯವು ರಾಷ್ಟ್ರಕೂಟ ಶೈಲಿಯದಾಗಿದ್ದು, ಬ್ರಾಹ್ಮಣರ ತೋಟದಲ್ಲಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ದ್ವಿಕೂಟ ರಚನೆಯಾಗಿದೆ. ಎರಡು ಗರ್ಭಗೃಹಗಳು ಹಾಗೂ ಅವುಗಳನ್ನು ಒಳಗೊಂಡಂತೆ ಒಂದು ನವರಂಗವನ್ನು ಹೊಂದಿದೆ. ಇಲ್ಲಿರುವ ಎರಡು ಗರ್ಭಗೃಹಗಳು ಭಾಗಶಃ ಹಾಳಾಗಿವೆ. ಒಂದರಲ್ಲಿ ಲಿಂಗವನ್ನು ಇನ್ನೊಂದರಲ್ಲಿ ಗಣಪತಿಯ ಶಿಲ್ಪವನ್ನು ಇಡಲಾಗಿದೆ.

ನವರಂಗವು ನಾಲ್ಕು ಕಂಬಗಳನ್ನು ಹಾಗೂ ಅವುಗಳನ್ನು ಒಳಗೊಂಡಂತೆ ಎತ್ತರದ ಕಟ್ಟೆಯನ್ನು ಹೊಂದಿರುವುದು. ಕಂಬಗಳು ಗಾತ್ರದಲ್ಲಿ ಗಿಡ್ಡಗಿದ್ದು ಚೌಕಾಕಾರದ ಬೋಧಿಗೆಗಳನ್ನು ಹೊಂದಿವೆ. ಅವು ಕಲ್ಯಾಣ ಚಾಲುಕ್ಯ ಆಡಳಿತದ ಪ್ರಾರಂಭಕಾಲದಲ್ಲಿ ನಿರ್ಮಾಣವಾಗಿರುವ ಲಕ್ಷಣಗಳನ್ನು ಒಳಗೊಂಡಿರುವೆ. ಬಾಗಿಲ ಚೌಕಟ್ಟಿನ ಮೇಲ್ಭಾಗದಲ್ಲಿ ದ್ರಾವಿಡ ಶಿಖರ ಮಾದರಿಯ ಅಲಂಕಾರದ ಚಿಕ್ಕ ಮಂಟಪಗಳನ್ನು ಕಂಡರಿಸಲಾಗಿದೆ. ದೇವಾಲಯದ ಹೊರಗೋಡೆಯಲ್ಲಿ ಅರ್ಧಕಂಬಗಳನ್ನು ಸುತ್ತಲೂ ನಿರ್ಮಿಸಲಾಗಿದೆ.

ಕಲಚೂರಿ ಸಂಕಮದೇವನ ಕಾಲಕ್ಕೆ ಸೇರಿದ ಕ್ರಿ.ಶ.೧೧೭೪ರ ತೇದಿವುಳ್ಳ ಶಾಸನ[೭]ವೊಂದು ಸೋಮೇಶ್ವರ ದೇವಾಲಯದ ಗೋಡೆಯಲ್ಲಿದೆ. ಸಿಂದವಂಶದ ಮಹಾಮಂಡಳೇಶ್ವರ ವಿಕ್ರಮಾದಿತ್ಯನಿಂದ ಚಾಮೇಶ್ವರ ಮತ್ತು ಮಲ್ಲೇಶ್ವರ ದೇವರಿಗೆ ಭೂಮಿಯನ್ನು ದಾನ ಮಾಡಿರುವ ಉಲ್ಲೇಖವಿದೆ. ಬಹುಶಃ ಶಾಸನದಲ್ಲಿ ಉಲ್ಲೇಖಿತ ಚಾಮೇಶ್ವರ ದೇವಾಲಯವೇ ಈಗಿನ

ಸೋಮೇಶ್ವರ ದೇವಾಲಯವಾಗಿರಬಹುದು. ಆದರೆ ಮಲ್ಲೇಶ್ವರ ದೇವಾಲಯ ಯಾವುದೆಂಬುದು ತಿಳಿಯಲಾಗಿಲ್ಲ.

## ೪. ರಾಮಲಿಂಗನ ದೇವಾಲಯ

ರೋಣ ಪಟ್ಟಣದಲ್ಲಿ ಕೆರೆಯ ದಂಡೆಯ ಮೇಲಿರುವ ರಾಮಲಿಂಗನ್ ದೇವಾಲಯವನ್ನು ರಾಷ್ಟ್ರಕೂಟ ಶೈಲಿಯಲ್ಲಿ, ೧೦-೧೧ನೇ ಶತಮಾನದಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ.

ಚೌಕಾಕಾರದ ತಲವಿನ್ಯಾಸದಲ್ಲಿ ನಿರ್ಮಿತವಾದ ದೇವಾಲಯವು ಗರ್ಭಗೃಹ, ಅಂತರಾಳ ಹಾಗೂ ನವರಂಗಗಳನ್ನು ಒಳಗೊಂಡಿದೆ. ಗರ್ಭಗೃಹವು ಎತ್ತರದ ಚೌಕಾಕಾರದ ಪೀಠವುಳ್ಳ ಲಿಂಗವನ್ನು ಒಳಗೊಂಡಿದ್ದು. ಸಾದಾ ಬಾಗಿಲವಾಡದಲ್ಲಿ ಗಜಲಕ್ಷ್ಮಿಯ ಉಬ್ಬು ಶಿಲ್ಪದ ಕೆತ್ತನೆಯನ್ನು ಹೊಂದಿದೆ. ತೆರೆದ ಅಂತರಾಳ ಭಾಗವು ಬರಿದಾಗಿದ್ದು ಎರಡು ಚೌಕಾಕಾರದ ಕಂಬಗಳನ್ನು ಹೊಂದಿದೆ. ನವರಂಗವು ಚೌಕಾಕಾರದ ಪೀಠದ ಮೇಲೆ ಗಂಟೆಯಾಕಾರದ ರಚನೆಯುಳ್ಳ ಕಂಬಗಳನ್ನು ಹೊಂದಿದ್ದು, ಅವುಗಳಿಗೆ ಬೋಧಿಗೆಗಳನ್ನು ಭೋದಿಸಲಾಗಿದೆ. ಇವುಗಳಲ್ಲದೆ ಗೋಡೆಯಲ್ಲಿನ ಅರ್ಧಗಂಬಗಳನ್ನು ಹೊಂದಿದೆ. ನವರಂಗದ ಸರಳ ಬಾಗಿಲವಾಡವು ಪಂಚ ಪಟ್ಟಿಕೆಗಳನ್ನು ಹೊಂದಿದ್ದು ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವನ್ನು ಒಳಗೊಂಡಿದೆ. ದೇವಾಲಯದ ಅಧಿಷ್ಠಾನ ಭಾಗವು ಮಣ್ಣಿನಲ್ಲಿ ಮುಚ್ಚಿದ್ದು, ಹೋಗಿದೆ. ಹೊರಭಿತ್ತಿಯು ಸರಳ ಗೋಡೆಗಂಬಗಳಿಂದ ಅಲಂಕೃತಗೊಂಡಿದೆ. ಪ್ರಾಚೀನ ಶಿಖರಭಾಗವು ಸಂಪೂರ್ಣವಾಗಿ ನಾಶಗೊಂಡಿದ್ದು, ಪ್ರಸ್ತುತ ಆಧುನಿಕ ಶೈಲಿಯನ್ನೊಳಗೊಂಡ ಶಿಖರ ಭಾಗವನ್ನು ನಿರ್ಮಿಸಲಾಗಿದೆ. ದೇವಾಲಯದ ಆವರಣದಲ್ಲಿ ಭಗ್ನಗೊಂಡ ನಂದಿಶಿಲ್ಪಗಳನ್ನು ಅಲ್ಲಲ್ಲಿ ಕಾಣಬಹುದು. ಹಾಗೂ ಮುಂಭಾಗದಲ್ಲಿ ಒಂದು ಅಪ್ರಕಟಿತ ವೀರಗಲ್ಲು ಶಾಸನವಿದೆ.



## ೫. ಕಲ್ಮೇಶ್ವರ ದೇವಾಲಯ ಅಥವಾ ಈಶ್ವರ ದೇವಾಲಯ

ರೋಣ ಪಟ್ಟಣದಲ್ಲಿರುವ್ ಈಶ್ವರ ದೇವಾಲಯವನ್ನು ೧೦-೧೧ನೇ ಶತಮಾನದಲ್ಲಿ, ರಾಷ್ಟ್ರಕೂಟ ಶೈಲಿಯಲ್ಲಿ, ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ. ದೇವಾಲಯ ನಿರ್ಮಾಣಕ್ಕೆ ಕಣಶಿಲೆಯನ್ನು ಬಳಸಲಾಗಿದೆ.

ಚೌಕಾಕಾರದ ತಲನಕ್ಷೆಯನ್ನು ಹೊಂದಿರುವ ದೇವಾಲಯವು ತಿರ್ಯಙ್ಮುಖ ಕ್ರಮದಲ್ಲಿ ಗರ್ಭಗೃಹ, ಅಂತರಾಳ, ವಿಶಾಲವಾದ ನವರಂಗ, ಹಾಗೂ ಚಿಕ್ಕ ಮುಖಮಂಟಪ ಭಾಗಗಳನ್ನು ಒಳಗೊಂಡಿದೆ. ಊರ್ಧ್ವಮುಖ ಕ್ರಮದಲ್ಲಿ ಅಧಿಷ್ಠಾನ, ಭಿತ್ತಿ, ಪ್ರಸ್ತರ ಹಾಗೂ

ಎರಡು ತಲಗಳನ್ನು ಹೊಂದಿರುವ ಶಿಖರಭಾಗವನ್ನು ಕಾಣಬಹುದು. ಗರ್ಭಗೃಹದಲ್ಲಿ ಚೌಕಾಕಾರದ ಪೀಠದ ಮೇಲೇ ಎತ್ತರದ ರುದ್ರಭಾಗವನ್ನು ಹಾಗೂ ಉದ್ದವಾದ ಪ್ರನಾಳಿಯನ್ನು ಹೊಂದಿದ ದೊಡ್ಡ ಗಾತ್ರದ ಲಿಂಗವಿದೆ. ಗರ್ಭಗೃಹದಲ್ಲಿ ಗೋಡೆಗಂಬಗಳ ರಚನೆಯಿದ್ದು, ಅವುಗಳಿಗೆ ಬೋದಿಗೆಗಳನ್ನು ಅಳವಡಿಸಲಾಗಿದೆ. ಗರ್ಭಗೃಹದ ಬಾಗಿಲವಾಡವು ಸರಳ ರಚನೆಯುಳ್ಳದ್ದಾಗಿದ್ದು, ಲಲಾಟದಲ್ಲಿ ಗಜಲಕ್ಷ್ಮೀಯ ಉಬ್ಬುಶಿಲ್ಪ ಕೆತ್ತನೆಯಿದೆ. ಗರ್ಭಗೃಹಕ್ಕೆ ತೆರೆದ ಅಂತರಾಳವಿದ್ದು ಭಗ್ನಗೊಂಡ ಎರಡು ಅಲಂಕೃತ ನಂದಿ ವಿಗ್ರಹಗಳನ್ನು ಇರಿಸಲಾಗಿದೆ. ಸುಂದರವಾದ ತೋರಣ ಕಂಬಗಳನ್ನು ಅಂತರಾಳದಲ್ಲಿ ಜೋಡಿಸಲಾಗಿದೆ. ಈ ತೋರಣದಲ್ಲಿ ಬಲಕ್ಕೆ ಬ್ರಹ್ಮ, ಎಡಕ್ಕೆ ವಿಷ್ಣು ಹಾಗೂ ಮಧ್ಯದಲ್ಲಿ ನಟರಾಜನ ಉಬ್ಬುಶಿಲ್ಪಗಳಿವೆ. ಈ ಶಿಲ್ಪಗಳ ಮಧ್ಯದಲ್ಲಿ ಚಿಕ್ಕ ಮಂಟಪಗಳನ್ನು ನಿರ್ಮಿಸಿದ್ದು ಅವುಗಳಲ್ಲಿ ಸ್ತ್ರೀ ದೇವತೆಗಳ ಉಬ್ಬುಶಿಲ್ಪಗಳನ್ನು ಕಂಡಿರಿಸಲಾಗಿದೆ. ಅಲ್ಲದೇ ಸುಂದರ ಪಟ್ಟಿಕೆಯಿಂದ ಇಡೀ ತೋರಣವನ್ನು ಸುಂದರಗೊಳಿಸಲಾಗಿದೆ. ವಿಶಾಲವಾದ ನವರಂಗವು ಗಂಟೆಯಾಕರದ ಸರಳ ರಚನೆಯ ಕಂಬಗಳನ್ನು ಒಳಗೊಂಡಿದೆ. ಇಲ್ಲಿ ಚೌಕಾಕಾರದ ಪೀಠವುಳ್ಳ ಮತ್ತೊಂದು ಲಿಂಗ, ಪಾನಿ ಪೀಠಗಳ ಮೇಲೆ ಇಟ್ಟ ಗಣೇಶನ ಬಿಡಿಶಿಲ್ಪ ಹಾಗೂ ಸಪ್ತಮಾತೃಕೆಯ ಬಿಡಿ ಶಿಲ್ಪಗಳನ್ನು ಕಾಣಬಹುದು. ನವರಂಗದ ಬಾಗಿಲವಾಡವು ಸರಳ ಪಟ್ಟಿಕೆಗಳಿಂದ ಕೂಡಿದ್ದು ಗಜಲಕ್ಷ್ಮೀಯ ಉಬ್ಬಶಿಲ್ಪ ಕೆತ್ತನೆಯನ್ನು ಹೊಂದಿದೆ. ಮೇಲ್ಛಾವಣಿಯವರೆಗೆ ವಿಸ್ತರಿಸಿದ ಬಾಗಿಲವಾಡದ ಮೇಲ್ಭಾಗದಲ್ಲಿ ಚಿಕ್ಕ ಚಿಕ್ಕ ಮಂಟಪಗಳು ಶಿಖರವನ್ನೊಳಗೊಂಡ ಸೂಕ್ಷ್ಮರಚನೆಯನ್ನು ಕಾಣಬಹುದು. ದೇವಾಲಯಕ್ಕೆ ಚಿಕ್ಕ ಮುಖಮಂಟಪವನ್ನು ನಿರ್ಮಿಸಲಾಗಿದೆ. ಇದರಲ್ಲಿರುವ ಕಂಬಗಳು ಅಷ್ಟಕೋನಾಕಾರದವು. ಮುಖಮಂಟಪದ ಮೇಲ್ಛಾವಣಿಯ ಕಪೋತದ ಭಾಗದಲ್ಲಿ ಕೆಲವು ಪ್ರಾಣಿ ಪಕ್ಷಿಗಳ ಉಬ್ಬು ಕೆತ್ತನೆಯಿದೆ. ದೇವಾಲಯದ ಸರಳ ಅಧಿಷ್ಠಾನ ಭಾಗವು ಮಣ್ಣಿನಲ್ಲಿ ಹೂತುಹೋಗಿದೆ. ಹೊರ ಭಿತ್ತಿಯು ಅಲಂಕೃತವಾಗಿದ್ದು, ಗೋಡೆಗಂಬಗಳು ಮತ್ತು ಮಂಟಪಗಳ ರಚನೆಯನ್ನು ಹೊಂದಿದೆ. ಶಿಖರಭಾಗವು ಎರಡು ತಲಗಳಿಂದ ಕೂಡಿದ್ದು ಕೀರ್ತಿಮುಖಗಳ ರಚನೆಯನ್ನು ಕಾಣಬಹುದು. ಕೆಲವು ತ್ರುಟಿತಗೊಂಡ ಶಾಸನ ಶಿಲ್ಪಗಳನ್ನು ದೇವಾಲಯದ ಆವರಣದಲ್ಲಿಡಲಾಗಿದೆ.

ದೇವಾಲಯಕ್ಕೆ ಸಂಬಂಧಿಸಿದಂತೆ ಶಾಸನಗಳು[೧೦] ಪ್ರಕಟಗೊಂಡಿವೆ. ಕ್ರಿ.ಶ.೧೦೨೭ರ ತೇದಿವುಳ್ಳ ಶಾಸನ ಕಲ್ಯಾಣ ಚಾಲುಕ್ಯ ಎರಡನೆ ಜಯಸಿಂಹನಿಗೆ ಸಂಬಂಧಿಸಿದ್ದು. ಸಂಕಿಮಯ್ಯ ಕಟ್ಟಿಸಿದ ಮೂಲಸ್ಥಾನ ದೇವಾಲಯಕ್ಕೆ ಮಾಚಿಮಯ್ಯನು ಭೂಮಿಯ ದಾನ ಮಾಡಿರುವ ಉಲ್ಲೇಖವಿದೆ. ಶಾಸನದಲ್ಲಿ ಹೆಸರಿಸಲಾಗಿರುವ ಸಂಕಿಮಯ್ಯನು ಮಾಚಿಮಯ್ಯನ

ತಮ್ಮನಾಗಿದ್ದಾನೆ. ಆರನೇ ವಿಕ್ರಮಾದಿತ್ಯನ ಕಾಲದ ಒಂದು ಶಾಸನವು ಈ ದೇವಾಲಯದ ಮುಂಭಾಗದಲ್ಲಿದೆ. ಅದೊಂದು ಚಿಕ್ಕ ತುಣುಕಾಗಿದ್ದು, ಶಾಸನದ ಉಳಿದ ಭಾಗ ಇಲ್ಲವಾಗಿದೆ. ಇದು ಚಾಲುಕ್ಯ ಪ್ರಶಸ್ತಿಯ ಕೆಲವು ಸಾಲುಗಳನ್ನು ಒಳಗೊಂಡಿದೆ. ಇನ್ನೊಂದು ತ್ರುಟಿತಗೊಂಡ ಶಾಸನವು ೧೨ನೇ ಶತಮಾನಕ್ಕೆ ಸೇರಿದ್ದು, ಕಲ್ಮೇಶ್ವರ ದೇವಾಲಯಕ್ಕೆ ಸುವರ್ಣದಾನ ನೀಡಿರುವ ಮಾಹಿತಿ ತಿಳಿಸುತ್ತದೆ.

## ೬. ಲೋಕನಾಥ ಅಥವಾ ಬಸವೇಶ್ವರ ದೇವಾಲಯ

ರೋಣ ಪಟ್ಟಣದ ಗೌಡರ ಓಣಿಯಲ್ಲಿರುವ ಲೋಕನಾಥ[೧೧] ದೇವಾಲಯವು ೧೦-೧೧ನೇ ಶತಮಾನಕ್ಕೆ ಸೇರಿದುದಾಗಿದೆ. ರಾಷ್ಟ್ರಕೂಟ ಶೈಲಿಯಲ್ಲಿ ನಿರ್ಮಾಣಗೊಂಡ ಈ ದೇವಾಲಯ ಪೂರ್ವಾಭಿಮುಖ ಹೊಂದಿದ್ದು ದ್ವಿಕೂಟಚಲವಾಗಿದೆ.

ಚಚ್ಚೌಕ ತಲವಿನ್ಯಾಸವನ್ನು ಹೊಂದಿರುವ ದೇವಾಲಯವು ಎದುರು ಬದಿರಾಗಿರುವ ಎರಡು ಗರ್ಭಗೃಹಗಳು, ಅಂತರಾಳಗಳು ಹಾಗೂ ಇವುಗಳನ್ನೊಳಗೊಂಡಂತೆ ಒಂದು ನವರಂಗವನ್ನು ಹೊಂದಿದೆ. ಪೂರ್ವಾಭಿಮುಖವಾಗಿರುವ ಗರ್ಭಗೃಹದಲ್ಲಿ ಭುವನೇಶ್ವರಿಯ ಅಲಂಕರಣೆಯಿದ್ದು, ಲಿಂಗವನ್ನು ಒಳಗೊಂಡಿದೆ. ಈ ಲಿಂಗದ ಪೀಠದ ಅರ್ಧಭಾಗವು ಮುಚ್ಚಿ ಹೋಗಿದ್ದು, ರುದ್ರಭಾಗವನ್ನು ಕಾಣಬಹುದು. ಗರ್ಭಗೃಹದ ಬಾಗಿಲವಾಡವು ಸರಳ ಪಟ್ಟಿಕೆಗಳ ರಚನೆಯಿಂದ ಕೂಡಿದೆ. ಅಲ್ಲದೆ ಇದು ಬರಿದಾದ ಅಂತರಾಳವನ್ನು ಒಳಗೊಂಡಿದ್ದು, ಜಾಲಾಂಧ್ರ ವ್ಯವಸ್ಥೆಯನ್ನು ಹೊಂದಿದೆ. ನವರಂಗದ ಭಾಗವು ವಿಶಾಲವಾಗಿದ್ದು, ನಂದಿ, ಸಪ್ತಮಾತೃಕೆ, ಬಿಡಿಶಿಲ್ಪಗಳು ಹಾಗೂ ಕೆಲವು ಲಿಂಗದ ರುದ್ರಭಾಗಗಳನ್ನು ನವರಂಗದಲ್ಲಿಡಲಾಗಿದೆ. ನವರಂಗದಲ್ಲಿನ ಕಂಬಗಳು ಗಂಟೆಯಾಕಾರದವಾಗಿದ್ದು ಬೋಧಿಗೆಗಳನ್ನು ಒಳಗೊಂಡಿವೆ. ಪಶ್ಚಿಮಾಭಿಮುಖವಾಗಿ ರಚಿತವಾಗಿರುವ ಗರ್ಭಗೃಹವು ಸರಳ ಭುವನೇಶ್ವರಿಯನ್ನು ಹೊಂದಿದ್ದು ಲಿಂಗವನ್ನು ಒಳಗೊಂಡಿದೆ. ಈ ಗರ್ಭಗೃಹದ ಬಾಗಿಲವಾಡವು ಸರಳ ಪಟ್ಟಿಕೆಗಳ ರಚನೆಯನ್ನು ಹೊಂದಿದ್ದು ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವನ್ನು ಒಳಗೊಂಡಿದೆ. ಅಂತರಾಳದ ಭಾಗವನ್ನು ಒಳಗೊಂಡಿದ್ದರೂ ಪ್ರಸ್ತುತದಲ್ಲಿ ಈ ಅಂತರಾಳದ ಭಾಗದಲ್ಲಿಯೇ ದೇವಾಲಯಕ್ಕೆ ಪ್ರವೇಶವನ್ನು ಕಲ್ಪಿಸಲಾಗಿದೆ. ಆದ್ದರಿಂದ ಈ ಅಂತರಾಳ ಭಾಗವು ಧಕ್ಕೆಗೊಳಗಾಗಿದೆ.

ದೇವಾಲಯದ ಅಧಿಷ್ಠಾನವು ಮಣ್ಣಿನಲ್ಲಿ ಸಂಪೂರ್ಣವಾಗಿ ಮುಚ್ಚಿ ಹೋಗಿದ್ದು ಕೇವಲ ಭಿತ್ತಿಯ ಭಾಗವನ್ನು ಕಾಣಬಹುದು. ಈ ಭಿತ್ತಿಯಲ್ಲಿ ಅರ್ಧಕಂಬ ಅಥವಾ ಗೋಡೆಗಂಬಗಳನ್ನು ರಚಿಸಲಾಗಿದೆ. ಈ ಭಿತ್ತಿಯ ಹೆಚ್ಚಿನ ಭಾಗವು ಸವೆದು ಹೋಗಿದೆ.

ಶಿಖರ ಭಾಗವು ಒಂದು ತಲವನ್ನು ಹೊರತುಪಡಿಸಿ ಮೇಲ್ಭಾಗವೆಲ್ಲವೂ ನಾಶಗೊಂಡಿದೆ. ದೇವಾಲಯದ ಸಮುಚ್ಛಯದಲ್ಲಿ ಸೂರ್ಯನ ಪೀಠಭಾಗಗಳು, ತ್ರುಟಿತ ಮಹಿಷಾಸುರ ಮರ್ದಿನಿಯ ಶಿಲ್ಪ ಹಾಗೂ ಗಣೇಶನ ಬಿಡಿ ಶಿಲ್ಪಗಳನ್ನು ಕಾಣಬಹುದು.

## ೭. ಬಸವಣ್ಣ ದೇವಾಲಯ(ದ್ರೋಣಾಚಾರ್ಯ ಗುಡಿ)

ರೋಣ ಪಟ್ಟಣದಲ್ಲಿರುವ ೧೦-೧೧ನೇ ಶತಮಾನಕ್ಕೆ ಸೇರಿದ ಬಸವಣ್ಣ ದೇವಾಲಯ ಅಥವಾ ದ್ರೋಣಾಚಾರ್ಯರ ದೇವಾಲಯವು ರಾಷ್ಟಕೂಟ ಶೈಲಿಯಲ್ಲಿದೆ. ಇದು ಪೂರ್ವಾಭಿಮುಖವಾಗಿದ್ದು ಚೌಕಾಕಾರದ ತಲನಕ್ಷೆಯನ್ನು ಹೊಂದಿದೆ.

ಆದರೆ ಇಂದು ದೇವಾಲಯವು ಸಂಪೂರ್ಣವಾಗಿ ನವೀಕರಣಗೊಂಡಿದ್ದು, ಹಳೆಯ ಶಿಲ್ಪಾವಶೇಷ ಹಾಗೂ ಶಾಸನಗಳನ್ನು ಹೊರತುಪಡಿಸಿ ಕಟ್ಟಡದ ಯಾವುದೇ ಕುರುಹುಗಳಾಗಲೀ ಅಥವಾ ಅವಶೇಷಗಳಾಗಲೀ ಕಾಣಸಿಗುವುದಿಲ್ಲ. ದೇವಾಲಯದ ಗರ್ಭಗೃಹದಲ್ಲಿ ಹೊಸದಾದ ನಂದಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಹಾಗೂ ಮಂಟಪದಲ್ಲಿ ಕೋಷ್ಠಗಳನ್ನು ಅಳವಡಿಸಿ ಅವುಗಳಲ್ಲಿ ಒಂದರಲ್ಲಿ ಸಪ್ತಮಾತೃಕೆಯ ಶಿಲ್ಪ ಹಾಗು ಇನ್ನೊಂದರಲ್ಲಿ ದ್ರೋಣಾಚಾರ್ಯರದೆಂದು ಹೇಳಲಾಗುವ ಮೂರ್ತಿಯನ್ನು ಇಡಲಾಗಿದೆ. ಸುಮಾರು ನಾಲ್ಕು ಅಡಿ ಎತ್ತರದ ಈ ಶಿಲ್ಪವು ಪದ್ಮಾಸನದಲ್ಲಿದೆ. ದೇಹವನ್ನು ಮುತ್ತಿನ ಸರಗಳಿಂದ ಅಲಂಕಾರಗೊಳಿಸಿದ್ದಾರೆ. ಜಡೆಗಳು ಎರಡು ಭುಜದ ಮೇಲೆ ಇಳಿಬಿದ್ದಿವೆ. ಕೊರಳಲ್ಲಿ ಸರದ ಅಲಂಕಾರವನ್ನು ಮಾಡಲಾಗಿದೆ. ಯಜ್ಞೋಪವಿತ ಇದ್ದು ಎದೆಯ ಹಾಗೂ ಉದರದ ಕೆಳ ಭಾಗದಲ್ಲಿ ಸರದ ಪಟ್ಟಿಯನ್ನು ಚಿತ್ರಿಸಿದ್ದಾರೆ. ಪದ್ಮಾಸನದಲ್ಲಿರುವ ಈ ಶಿಲ್ಪದ ಕೆಳಭಾಗದಲ್ಲಿ ಗದೆಯನ್ನು ಚಿತ್ರಿಸಲಾಗಿದೆ. ರೋಣ ಪಟ್ಟಣವನ್ನು ಐತಿಹಾಸಿಕವಾಗಿ ದ್ರೋಣಪುರವೆಂದು ಹೇಳಿಕೊಳ್ಳುವ ಸಂದರ್ಭದಲ್ಲಿ ಈ ಮೂರ್ತಿಯನ್ನು ಪೂರಕವಾಗಿ ಬಳಸಿಕೊಳ್ಳಲಾಗಿದೆ. ಆದರೆ ಶಾಸನಗಳಲ್ಲಿ ರೋಣವೆಂದೇ ಉಲ್ಲೇಖಗೊಂಡಿದ್ದು, ಆ ದಿನಗಳಲ್ಲಿ ಇದು ೧೦೪ ಮಹಾಜನರ ಒಂದು ಪ್ರಸಿದ್ಧ ಅಗ್ರಹಾರವಾಗಿತ್ತೆಂಬುದು ತಿಳಿದುಬರುತ್ತದೆ.

ಈ ದೇವಾಲಯದಲ್ಲಿ ಒಟ್ಟು ನಾಲ್ಕು ಶಾಸನಗಳು[೧೩] ದೊರಕಿದ್ದು ಅವು ಪ್ರಕಟ ಗೊಂಡಿವೆ. ರಾಷ್ಟ್ರಕೂಟ ಒಂದನೆಯ ಅಮೋಘವರ್ಷನ ಕ್ರಿ.ಶ.೮೭೪ರ ತೇದಿವುಳ್ಳ ಶಾಸನದಲ್ಲಿ ಬಲ್ಲವರಸರಿಂದ ರೋಣದ ಮಹಾಜನರಿಗೆ ತುಪ್ಪದ ಸುಂಕ ದಾನ ಕೊಟ್ಟ ಉಲ್ಲೇಖವಿದೆ. ಈ ಶಾಸನವು ರಾಷ್ಟ್ರಕೂಟರಿಗೆ ಸಂಬಂಧಿಸಿದಂತೆ ತಾಲೂಕಿನಲ್ಲಿ ಸಿಗುವ ಮೊದಲ ಶಾಸನವೂ ಆಗಿದೆ. ಇದೇ ಗುಡಿಯಲ್ಲಿರುವ ಇನ್ನೊಂದು ಶಾಸನ ತುರಗ ಬೆಡಂಗನದು. ಅದರ ಕಾಲ ಕ್ರಿ.ಶ.೯ನೇ ಶತಮಾನ ಮಹಾಜನರಿಗೆ ಬನಿಯ ಬಿಟ್ಟಿರುವ ಉಲ್ಲೇಖವಿದೆ. ಮತ್ತೊಂದು

ಶಾಸನ ಆರನೆ ವಿಕ್ರಮಾದಿತ್ಯನಿಗೆ ಸೇರಿದ್ದು, ಕ್ರಿ.ಶ.೧೧೧ ತೇದಿವುಳ್ಳದಾಗಿದ್ದು, ಹೈಂಗಕುಲದ ನಾಗವಿಷ್ಣುವಿನಿಂದ ಮೂಲಸ್ಥಾನದೇವರಿಗೆ ಭೂಮಿ ಹಾಗೂ ಸುವರ್ಣದಾನ ನೀಡಿದ ಉಲ್ಲೇಖ ಹೊಂದಿದೆ. ಇನ್ನೊಂದು ಶಾಸನ ಗುಡಿಯ ಮುಂಭಾಗದಲ್ಲಿರುವ ಕಂಬದಲ್ಲಿದೆ. ಇದರ ಕಾಲ ಕ್ರಿ.ಶ.೧೫೪೭ ಆಗಿದ್ದು ಅಪೂರ್ಣವಾಗಿರುವುದರಿಂದ ಹೆಚ್ಚಿನ ಮಾಹಿತಿ ತಿಳಿದುಬರುವುದಿಲ್ಲ. ಆದರೆ ಇಂದು ದೇವಾಲಯದ ಆವರಣದಲ್ಲಿ ಎರಡೇ ಶಾಸನಗಳು ಕಾಣಸಿಗುತ್ತವೆ.

## ೮. ಬ್ರಹ್ಮೇಶ್ವರ ಅಥವಾ ತ್ರಿಮೂರ್ತೇಶ್ವರ ದೇವಾಲಯ

ಸವಡಿ ಗ್ರಾಮದಲ್ಲಿರುವ ಬ್ರಹ್ಮೇಶ್ವರ[೧೪] ದೇವಾಲಯವನ್ನು ೧೦-೧೧ನೇ ಶತಮಾನದಲ್ಲಿ, ರಾಷ್ಟ್ರಕೂಟರ ಶೈಲಿಯಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ. ದೇವಾಲಯವು ಕೆಂಪು ಮರಳು ಶಿಲೆಯಲ್ಲಿ ನಿರ್ಮಿತವಾಗಿದ್ದು ನಕ್ಷತ್ರಾಕಾರದ ತಲವಿನ್ಯಾಸವನ್ನು ಹೊಂದಿದೆ.

ತಿರ್ಯಙ್ಮುಖ ಕ್ರಮದಲ್ಲಿ ದೇವಾಲಯವು ಗರ್ಭಗೃಹ, ಅಂತರಾಳ ಹಾಗೂ ವಿಶಾಲವಾದ ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ ಉದ್ದವಾದ ಒಂದೇ ಪೀಠದಲ್ಲಿ ಬ್ರಹ್ಮ, ಶಿವಲಿಂಗ ಹಾಗೂ ವಿಷ್ಣುವಿನ ಮೂರ್ತಿಗಳನ್ನು ಕಾಣಬಹುದು. ಪೀಠದಲ್ಲಿ ಹಂಸ ವಾಹನ ಸಂಕೇತವನ್ನು ಹೊಂದಿದ್ದು ಸಮಭಂಗಿಯಲ್ಲಿ ನಿಂತಿರುವ ಬ್ರಹ್ಮನ ಶಿಲ್ಪವು ಅತಿ ಆಕರ್ಷಕವಾಗಿದೆ. ಚತುರ್ಭುಜಧಾರಿಯಾದ ಶಿಲ್ಪವು ಸುಂದರ ವಸ್ತ್ರಾಭರಣಗಳಿಂದ ಅಲಂಕೃತಗೊಂಡಿದೆಯಲ್ಲದೇ ಎಡಬಲದಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ಉಪದೇವತೆಗಳ ಉಬ್ಬುಶಿಲ್ಪಗಳ ಕೆತ್ತನೆಯನ್ನು ಹೊಂದಿದೆ. ಮಧ್ಯಭಾಗದಲ್ಲಿರುವ ವೃತ್ತಾಕಾರದ ಪೀಠವುಳ್ಳ ಶಿವಲಿಂಗವೂ ಆಕರ್ಷಕವಾಗಿದ್ದು, ಪೀಠ ಭಾಗದಲ್ಲಿ ನಂದಿವಾಹನದ ಕೆತ್ತನೆಯನ್ನೊಳಗೊಂಡಿದೆ. ಶಿವಲಿಂಗದ ಎಡಭಾಗದಲ್ಲಿರುವ ವಿಷ್ಣುವಿನ ಮೂರ್ತಿಯೂ ಕೂಡ ನೋಡಲು ಸುಂದರವಾಗಿದೆ. ಚತುರ್ಭುಜ ಧಾರಿಯಾದ ವಿಷ್ಣುವಿನ ಶಿಲ್ಪವೂ ಸುಂದರ ವಸ್ತ್ರಾಭರಣಗಳಿಂದ ಅಲಂಕೃತಗೊಂಡಿದೆ. ಬ್ರಹ್ಮನಶಿಲ್ಪದಂತೆಯೇ ಈ ಶಿಲ್ಪವೂ ಕೂಡ ಎಡಬಲ ಭಾಗಗಳಲ್ಲಿ ತ್ರಿಭಂಗಿಯಲ್ಲಿರುವ, ಉಪದೇವತೆಗಳ ಉಬ್ಬುಶಿಲ್ಪಗಳ ಸುಂದರ ಕೆತ್ತನೆಯನ್ನೊಳಗೊಂಡಿದೆ. ಪೀಠಭಾಗದಲ್ಲಿ ಗರುಡನ ಉಬ್ಬುಶಿಲ್ಪ ಕೆತ್ತನೆಯಿದೆ. ದೇವಾಲಯಕ್ಕೆ ತೆರೆದ ಅಂತರಾಳವಿದ್ದು, ಅಲ್ಲಿ ನಂದಿ ವಿಗ್ರಹವನ್ನಿಡಲಾಗಿದೆ. ಅಲ್ಲದೇ ಈ ಅಂತರಾಳಭಾಗವು ರಾಷ್ಟ್ರಕೂಟ ರಚನಾ ಶೈಲಿಯ ಕಂಬಗಳನ್ನು ಒಳಗೊಂಡಿದ್ದು, ಅವುಗಳು ಕೆಳ ಭಾಗದಲ್ಲಿ ಚೌಕಾಕಾರ, ಮಧ್ಯಭಾಗದಲ್ಲಿಯೂ ಚೌಕಾಕಾರದ ಕೆತ್ತನೆ ಹಾಗೂ ಮೇಲ್ಭಾಗದಲ್ಲಿ ತಟ್ಟೆಯಾಕಾರದ ಫಲಕ ಮತ್ತು ಬೋದಿಗೆಗಳ ಜೋಡಣೆಯನ್ನು ಹೊಂದಿವೆ. ಬಾಗಿಲವಾಡವು ಸರಳವಾಗಿದ್ದು ಲಲಾಟದಲ್ಲಿ ಗಜಲಕ್ಷ್ಮಿಯ

ಉಬ್ಬುಶಿಲ್ಪ ಕೆತ್ತನೆಯಿದೆ. ನವರಂಗ ಭಾಗವು ವಿಶಾಲವಾಗಿದ್ದು, ಸುಮಾರು ಅರವತ್ತು ಕಂಬಗಳನ್ನು ಹೊಂದಿದೆ. ಈ ಕಂಬಗಳೆಲ್ಲವೂ ರಾಷ್ಟ್ರಕೂಟ, ಕಲ್ಯಾಣಚಾಲುಕ್ಯ ಹಾಗೂ ವಿಜಯನಗರ ಕಾಲಕ್ಕೆ ಸೇರಿದವುಗಳಾಗಿವೆ. ಅಲ್ಲದೇ ಇಲ್ಲಿ ಚೌಕಾಕಾರದ ಹಾಗೂ ಕಟ್ಟೆಯಾಕಾರದ ಪೀಠವುಳ್ಳ ಎರಡು ಲಿಂಗಗಳು ಹಾಗೂ ಭಗ್ನಗೊಂಡ ಸಪ್ತಮಾತೃಕೆಯ ಶಿಲ್ಪ, ಗಣೇಶ ವಿಗ್ರಹ ಮತ್ತು ನಂದಿ ಶಿಲ್ಪಗಳನ್ನು ಒಂದೆಡೆ ಇಡಲಾಗಿದೆ. ದೇವಾಲಯದ ಅಧಿಷ್ಠಾನ ಭಾಗವು ಮಣ್ಣಿನಲ್ಲಿ ಮುಚ್ಚಿದ್ದು, ಹಾಗೂ ಕುಸಿದು ಬಿದ್ದಿರುವ ಭಿತ್ತಿ ಭಾಗವನ್ನು ಸ್ಥಳೀಯರು ಅಲ್ಲಿಯೇ ಲಭ್ಯವಾದ ಕಲ್ಲುಗಳಿಂದ ಜೋಡಿಸಿ ತಾತ್ಕಾಲಿಕ ಸಂರಕ್ಷಣೆ ಒದಗಿಸಿದ್ದಾರೆ. ಹಾಗೂ ಶಿಖರ ಭಾಗವು ಸಂಪೂರ್ಣ ನಾಶವಾಗಿದೆ. ರಾಷ್ಟ್ರಕೂಟ ಕಾಲದಿಂದ ವಿಜಯನಗರ ಕಾಲದವರೆಗೂ ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಂಡಿದ್ದ ದೇವಾಲಯವೊಂದು ವಿನಾಶದ ಅಂಚಿನಲ್ಲಿದೆ ಎಂದು ಹೇಳಬಹುದು. ರೋಣ ತಾಲೂಕಿನಲ್ಲಿ ಕಂಡುಬರುವ ತ್ರೈಪುರುಷ ದೇವಾಲಯಗಳಲ್ಲಿ ಇದು ಪ್ರಮುಖವಾದುದಾಗಿದೆ.

ಕೆ.ವಸಂತಲಕ್ಷ್ಮಿಯವರು “ಈ ಪ್ರದೇಶದಲ್ಲಿ (ಗದಗ ಜಿಲ್ಲೆಯಲ್ಲಿ) ತ್ರಿಕೂಟಾಚಲಕ್ಕಿಂತ ಮೊದಲು ‘ತ್ರೈಪುರುಷ ದೇವಾಲಯ’ಗಳನ್ನು ನಿರ್ಮಿಸಲಾಗಿದೆ. ಒಂದು ರೀತಿಯಲ್ಲಿ ನೋಡಿದರೆ ತ್ರೈಪುರುಷ ದೇವಾಲಯಗಳ ಸ್ವರೂಪವೇ ವಿಕಾಸಗೊಂಡು ‘ತ್ರಿಕೂಟಾಚಲ’ಗಳು ನಿರ್ಮಾಣವಾಯಿತೆನ್ನಬಹುದು.”[೧೫] ಎಂದಿದ್ದಾರೆ. ಅಲ್ಲದೆ ಈ ರೀತಿ ಹೇಳುವಾಗ ಸವಡಿ ಗ್ರಾಮದ ಈ ಬ್ರಹ್ಮೇಶ್ವರ ದೇವಾಲಯವನ್ನೇ ಉದಾಹರಣೆಯಾಗಿ ತೆಗೆದುಕೊಂಡು ಅದು ವಿಶೇಷ ಗಮನ ಸೆಳೆಯುತ್ತದೆ ಎಂದಿದ್ದಾರೆ. ಅಂದರೆ ತ್ರಿಕೂಟಾಚಲಗಳಿಗಿಂತ ಮೊದಲು ತ್ರೈಪುರುಷ ದೇವಾಲಯಗಳನ್ನು ನಿರ್ಮಿಸಿ ತ್ರಿಕೂಟ ಕಲ್ಪನೆಯನ್ನು ಇದರಲ್ಲಿ ತೋರಿಸಿದ್ದಾರೆ. ನಂತರ ಕಾಲದಲ್ಲಿ ವಾಸ್ತುಶಿಲ್ಪ ವಿಕಾಸಗೊಂಡು ತ್ರಿಮೂರ್ತಿಗಳಿಗೆ ಪ್ರತ್ಯೇಕ ಗರ್ಭಗೃಹಗಳನ್ನು ನಿರ್ಮಿಸಿ ತ್ರಿಕೂಟ ಎಂದು ಕರೆಯಲಾಯಿತು ಎಂಬುದನ್ನು ಗಮನಿಸಬಹುದು.

ಶಾಸನೋಕ್ತ ಉಲ್ಲೇಖವಿರುವ ದೇವಾಲಯವಿದು. ಸವಡಿಯ ಮೂರು ಶಾಸನಗಳು[೧೬] ಪ್ರಕಟವಾಗಿವೆ. ಕ್ರಿ.ಶ.೯೭೦ರ ರಾಷ್ಟ್ರಕೂಟ ಅರಸ ಖೊಟ್ಟಿಗನ ಶಾಸನವು ದೇವಾಲಯ ನಿರ್ಮಾಣದ ಬಗೆಗೆ ಮಾಹಿತಿ ನೀಡುತ್ತದೆ. ಆದರೆ ದೇವಾಲಯದ ಹೆಸರಿನ ಬಗೆಗೆ ಸ್ಪಷ್ಟ ಮಾಹಿತಿ ನೀಡಿಲ್ಲ. ದೇವಾಲಯ ಮತ್ತು ಮಂಟಪಗಳ ರಚನೆ ಹಾಗು ವೆಂಗಿಯ ಗದುಗಯ್ಯನ ವರ್ಣನೆ ಇದೆ. ಶಾಸನವು ತ್ರುಟಿತವಾಗಿದ್ದರಿಂದ ವಿವರವಾದ ಮಾಹಿತಿ ಪಡೆಯುವುದು ಕಷ್ಟ. ಈ ಶಾಸನವು ಸ್ಥಳಾಂತರಗೊಂಡು ಗ್ರಾಮದ ಪಂಚಾಯತಿ ಮುಂದಿರುವುದು. ಇದೇ ಸ್ಥಳದಲ್ಲಿ ಕ್ರಿ.ಶ.೧೦೮೩ರ ತೇದಿಯ ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ

ಶಾಸನವೊಂದಿದೆ. ಇದು ಮಹಾಮಂಡಳೇಶ್ವರ ಭೂಲೋಕಮಲ್ಲ ಪೇರ್ಮಾಡಿ ಕಿಸುಕಾಡು-೭೦, ಬಾಗಡಿಗೆ-೭೦ ಹಾಗೂ ನರಂಗಲ್ಲ-೧೨ನ್ನು ಆಳುವಾಗ ಮೂಲಸ್ಥಾನ ದೇವರಿಗೆ ದತ್ತಿ ಬಿಟ್ಟಿರುವ ಉಲ್ಲೇಖವನ್ನು ಹೊಂದಿದೆ. ಶಾಸನದಲ್ಲಿ ಉಲ್ಲೇಖವಾದ ಮೂಲಸ್ಥಾನ ದೇವರೆಂದರೆ ಬಹುಶಃ ಬ್ರಹ್ಮೇಶ್ವರ ದೇವಾಲಯವೇ ಆಗಿರಬಹುದು. ಮತ್ತೊಂದು ಮುಖ್ಯವಾದ ಶಾಸನ ಇದೇ ದೇವಾಲಯದ ನವರಂಗದ ಕಂಬವೊಂದರಲ್ಲಿದೆ. ಕ್ರಿ.ಶ.೧೪೭೧ರ ತೇದಿಯ ವಿಜಯನಗರ ಅರಸ ಎರಡನೇ ದೇವರಾಯನ ಕಾಲಕ್ಕೆ ಸಂಬಂಧಿಸಿದ್ದು, ಬಾದಾಮಿ ಸೀಮೆಯಲ್ಲಿ ಆಳುತ್ತಿದ್ದ ಚೌಡನಾಯಕನು ಇಲ್ಲಿನ ತ್ರೈಪುರುಷ(ಬ್ರಹ್ಮೇಶ್ವರ) ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದ ಉಲ್ಲೇಖವಿದೆ.

## ೯. ಮಲ್ಲಿಕಾರ್ಜುನ ದೇವಾಲಯ

ಚಾರಿತ್ರಿಕ ಪರಂಪರೆ ಹಾಗೂ ವಾಸ್ತುಶಿಲ್ಪಕಲಾ ದೃಷ್ಟಿಯಿಂದ ರೋಣ ತಾಲೂಕಿನಲ್ಲಿಯೇ ಹೆಚ್ಚು ಪ್ರಾಧಾನ್ಯತೆ ಪಡೆದ ಗ್ರಾಮ ಸೂಡಿ. ಸೂಡಿಯಲ್ಲಿರುವ ಮಲ್ಲಿಕಾರ್ಜುನ[೯೭] ದೇವಾಲಯವು ಗ್ರಾಮವನ್ನು ಪ್ರವೇಶಿಸುತ್ತಿದ್ದಂತೆಯೇ ಕಾಣಸಿಗುತ್ತದೆ. ೧೦-೧೧ನೇ ಶತಮಾನದಲ್ಲಿ ರಾಷ್ಟ್ರಕೂಟ ಶೈಲಿಯಲ್ಲಿ ಪೂರ್ವಾಭಿಮುಖವಾಗಿ ಈ ದೇವಾಲಯವನ್ನು ನಿರ್ಮಿಸಲಾಗಿದೆ. ಶಾಸನಗಳಲ್ಲಿ ಇದನ್ನು ಅಕ್ಕೇಶ್ವರ ದೇವಾಲಯವೆಂದು ಉಲ್ಲೇಖಿಸಿದ್ದಾರೆ. ರಾಷ್ಟ್ರಕೂಟ ರಚನಾ ಶೈಲಿಯನ್ನು ಉಳಿಸಿಕೊಂಡು ಕಲ್ಯಾಣ ಚಾಲುಕ್ಯರ ಆಡಳಿತದ ಪ್ರಥಮ ಪಾದದಲ್ಲಿ ನಿರ್ಮಾಣವಾಗಿರುವಂತಹ ದೇವಾಲಯವಿದು.

ಎತ್ತರದ ಕಟ್ಟೆಯ ಮೇಲೆ ತಲನಕ್ಷೆಯಲ್ಲಿ ಚೌಕಾಕಾರವಾಗಿ ದೇವಾಲಯವು ರಚನೆಗೊಂಡಿದೆ. ತಿರ್ಯಙ್ಮುಖ ಕ್ರಮದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಮತ್ತು ಅದರ ಇಕ್ಕೆಲಗಳಲ್ಲಿ ಇನ್ನೆರಡು ಗರ್ಭಗೃಹಗಳು ಹಾಗೂ ಮುಖಮಂಟಪವನ್ನು ಒಳಗೊಂಡ ತ್ರಿಕೂಟ ದೇವಾಲಯವಾಗಿದೆ. ಊರ್ಧ್ವಮುಖದಲ್ಲಿ ಅಧಿಷ್ಠಾನ, ಭಿತ್ತಿ ಪ್ರಸ್ತರ, ಗ್ರೀವ, ಶಿಖರ ಮತ್ತು ಸ್ತೂಪಿ ಭಾಗಗಳನ್ನು ಹೊಂದಿದೆ.

ಗರ್ಭಗೃಹವು ಚೌಕಾಕಾರವಾಗಿದ್ದು ಲಿಂಗವನ್ನು ಸ್ಥಾಪಿಸಲಾಗಿದೆ. ಗರ್ಭಗೃಹದ ಬಾಗಿಲವಾಡವು ಪಂಚಪಟ್ಟಿಕೆಯ ರಚನೆ ಹೊಂದಿದ್ದು ಅದರಲ್ಲಿ ಬಳ್ಳಿಯ ಕೆತ್ತನೆಯಿದೆ. ಅಲ್ಲದೆ ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಗರ್ಭಗೃಹಕ್ಕೆ ತೆರೆದ ಅಂತರಾಳವಿದ್ದು, ನಂದಿ ವಿಗ್ರಹವನ್ನು ಒಳಗೊಂಡಿದೆ. ಇಲ್ಲಿ ಎರಡು ಕಂಬಗಳಿದ್ದು, ಅವುಗಳನ್ನು ಶಿಲಾಬಂಧದಿಂದ ಜೋಡಿಸಲಾಗಿದೆ. ಈ ಜೋಡಣೆಯಲ್ಲಿ ಯಾಳಿ ರಚನೆ ಇದೆ. ಹಾಗೂ ಬ್ರಹ್ಮ, ವಿಷ್ಣು ಮಹೇಶ್ವರರ ಬಿಡಿ ಶಿಲ್ಪಗಳನ್ನು ಇದರಲ್ಲಿ ಕೆತ್ತಲಾಗಿದೆ. ಈ ಕಂಬಗಳ ಪಕ್ಕದಲ್ಲಿ

ಇನ್ನೆರಡು ಅಲಂಕೃತ ಕಂಬಗಳಿದ್ದು, ಅವು ಅಷ್ಟಪಟ್ಟಿಕೆಯ ರಚನೆ ಹೊಂದಿವೆಯಲ್ಲದೆ ವೃತ್ತಾಕಾರದ ಫಲಕಗಳು ಹಾಗು ಚೌಕಾಕಾರದ ಬೋದಿಗೆಗಳನ್ನು ಹೊಂದಿವೆ. ನವರಂಗದಲ್ಲಿ ಉತ್ತರ-ದಕ್ಷಿಣಾಭಿಮುಖವಾಗಿರುವ ಎರಡು ತೆರೆದ ಗರ್ಭಗೃಹಗಳಿವೆ. ಉತ್ತರಾಭಿಮುಖ ಗರ್ಭಗೃಹದಲ್ಲಿ ಅನಂತಶಯನನ ಸುಂದರ ಶಿಲ್ಪವಿದೆ. ನಾಭೀಯ ಮೂಲಕ ಬಂದಿರುವ ಕಮಲದಲ್ಲಿ ಬ್ರಹ್ಮ ಕುಳಿತ ಕೆತ್ತನೆಯಿದ್ದರೆ ಮೂರ್ತಿಯ ಅಡಿಯಲ್ಲಿ ಭೂದೇವಿ ಶ್ರೀದೇವಿಯರು ಸೇವೆ ಮಾಡುತ್ತಿರುವ ಕೆತ್ತನೆಯಿದೆ. ಸುತ್ತಲಿನ ಪ್ರಭಾವಳಿಯಲ್ಲಿ ದಶಾವತಾರದ ಕಥಾಸಂದರ್ಭವನ್ನು ಕೆತ್ತಲಾಗಿದೆ. ಇದು ಕಡುಗಪ್ಪುಶಿಲೆಯ ಸುಂದರ ವಿಗ್ರಹ. ದಕ್ಷಿಣಾಭಿಮುಖದ ಗರ್ಭಗೃಹದಲ್ಲಿ ಆಲಿಂಗನ ಶಿವ-ಪಾರ್ವತಿಯರ ಶಿಲ್ಪಗಳಿವೆ. ಈ ಶಿಲ್ಪಗಳು ಆಭರಣಾಲಂಕೃತವಾಗಿದ್ದು, ಸಮಭಂಗಿಯಲ್ಲಿವೆ. ನವರಂಗದಲ್ಲಿನ ನಾಲ್ಕು ಕಂಬಗಳು ಗಾತ್ರದಲ್ಲಿ ದೊಡ್ಡವು ಹಾಗೂ ಸುಂದರವಾಗಿವೆ. ಈ ಕಂಬಗಳು ಗಂಟೆಯಾಕಾರದವಾಗಿದ್ದು, ಮೇಲ್ಭಾಗದಲ್ಲಿ ತಟ್ಟೆಯಾಕಾರದ ಫಲಕ ಹಾಗೂ ದೊಡ್ಡದಾಗಿರುವ ಬೋದಿಗೆಗಳನ್ನು ಅಳವಡಿಸಲಾಗಿದೆ. ಕಮಲ ಪುಷ್ಪಮಾದರಿಯ ಭೂವನೇಶ್ವರಿಯನ್ನು ಕಾಣಬಹುದಾಗಿದೆ. ನವರಂಗದ ಬಾಗಿಲವಾಡವು ಐದು ಶಾಖೆಗಳಿಂದ ನಿರ್ಮಾಣವಾಗಿದೆ. ಇದರಲ್ಲೂ ಬಿಡಿಶಿಲ್ಪಗಳನ್ನು ಕಂಡರಿಸಿದ್ದಾರೆ. ನವರಂಗಕ್ಕೆ ಹೊಂದಿಕೊಂಡಂತೆ ತೆರೆದ ಮುಖಮಂಟಪವಿದೆ. ಈ ಮುಖಮಂಟಪದಲ್ಲಿನ ಕಂಬಗಳು ಚೌಕಾಕಾರದ ರಚನೆ ಹೊಂದಿದ್ದವುಗಳಾಗಿವೆ. ಇಲ್ಲಿಯೂ ಸುಂದರ ಕೆತ್ತನೆಯ ಭುವನೇಶ್ವರಿಯನ್ನು ರಚಿಸಲಾಗಿದೆ. ಮುಖಮಂಟಪದ ಪ್ರವೇಶಕ್ಕೆ ಮೆಟ್ಟಿಲುಗಳ ಸೋಪಾನವಿದೆ.

ಅಧಿಷ್ಠಾನ ಭಾಗವು ಉಪಾನ, ಜಗತಿ, ಗಳ, ತ್ರಿಪಟ್ಟ ಕುಮುದ ಹಾಗೂ ಕಪೋತ ಭಾಗಗಳನ್ನು ಹೊಂದಿದೆ. ಹೊರಭಿತ್ತಿಯು ಸುಂದರ ಕೆತ್ತನೆಯಿಂದ ಕೂಡಿದೆ. ಇಲ್ಲಿ ಕೆತ್ತಿರುವ ಅರ್ಧಮಂಟಪಗಳು ಸೂಕ್ಷ್ಮ ಪಂಜರಗಳಿಂದಲೂ ಹಾಗೂ ವಿವಿಧ ವಿನ್ಯಾಸದ ಶಿಖರಗಳಿಂದಲೂ ಮನಮೋಹಕವಾಗಿ ಕಾಣುತ್ತವೆ. ಮುಖ್ಯ ಗರ್ಭಗೃಹದ ಮೇಲೆ ವೇಸರ ಮಾದರಿಯ ಶಿಖರವಿದೆ.

ಈ ಮಲ್ಲಿಕಾರ್ಜುನ ದೇವಾಲಯದ ಎಡಭಾಗದಲ್ಲಿ ಸಣ್ಣ ಏಕಕೂಟ ದೇವಾಲಯವಿದೆ. ಒಂದೇ ಗರ್ಭಗೃಹವನ್ನು ಹೊಂದಿದ್ದು, ಮುಂದೆ ಎರಡು ವೃತ್ತಾಕಾರದ ಕಂಬಗಳನ್ನು ಅಳವಡಿಸಲಾಗಿದೆ. ಗರ್ಭಗೃಹದಲ್ಲಿ ಯಾವುದೇ ಮೂರ್ತಿಶಿಲ್ಪಗಳಿಲ್ಲ. ಸರಳ ಅಧಿಷ್ಠಾನ ಹೊಂದಿದ್ದು, ಹೊರಭಿತ್ತಿಯಲ್ಲಿ ಅರ್ಧಮಂಟಪಗಳ ರಚನೆಯಿದೆ. ಶಿಖರ ಭಾಗವು ಕೇವಲ ಪ್ರಸ್ತರ ಭಾಗವನ್ನು ಹೊಂದಿದ್ದು ಮೇಲಿನ ಭಾಗವು ಇಂದು ಕಾಣಸಿಗುವುದಿಲ್ಲ. ಇಲ್ಲಿಯ ಜನರು ಈ ದೇವಾಲಯವನ್ನು ಕಥೆ ಗುಡಿಯೆಂದು ಕರೆಯುತ್ತಾರೆ. ಈ ದೇವಾಲಯವು ತ್ರಿಕೂಟ ದೇವಾಲಯವಾಗಿದ್ದರಿಂದ ವಿದ್ಯಾಕೇಂದ್ರವೂ ಆಗಿತ್ತು ಎಂಬುದನ್ನು ಅರಿಯಬಹುದು.

ಕಥೆಗುಡಿಯೆಂದು ಕರೆಯಲಾಗುವ ಈ ಸಣ್ಣ ಗರ್ಭಗೃಹವನ್ನು ವಿದ್ಯಾದೇವತೆಯಾದ ಸರಸ್ವತಿಗಾಗಿ ನಿರ್ಮಿಸಲಾದ ದೇವಾಲಯವಾಗಿರಬಹುದೆಂದು ಊಹಿಸಬಹುದಾಗಿದೆ.

ಮಲ್ಲಿಕಾರ್ಜುನ ದೇವಾಲಯಕ್ಕೆ ಸಂಬಂಧಿಸಿದಂತೆ ಎರಡು ಶಾಸನಗಳು[೧೮] ಪ್ರಕಟವಾಗಿವೆ. ದೇವಾಲಯದ ಕಂಬದಲ್ಲಿ ಒಂದನೇ ಸೋಮೇಶ್ವರನ ಕಾಲದ ಕ್ರಿ.ಶ.೧೦೫೪ರ ತೇದಿವುಳ್ಳ ಶಾಸನವಿದೆ. ಇದು ಅಕ್ಕಾದೇವಿಯು ಕಿಸುಕಾಡು-೭೦, ತುರುಗೆರೆ-೬೦, ಮಾಸವಾದಿ ೧೪೦ನ್ನು ಆಳುತ್ತಿದ್ದಾಗ ಸೂಂಡಿಯ ಅಕ್ಕೇಶ್ವರ ದೇವರಿಗೆ ಪೆರ್ಗಡೆಯ ನಾಗದೇವಯ್ಯನು ಮತ್ತು ಇತರರು ದಾನ ನೀಡಿದ ಉಲ್ಲೇಖವನ್ನು ಹೊಂದಿದೆ. ಮತ್ತೊಂದು ಕಂಬದಲ್ಲಿರುವ ಒಂದನೇ ಸೋಮೇಶ್ವರನ ಕಾಲದ ೧೦೫೮ರ ತೇದಿವುಳ್ಳ ಶಾಸನವು ಅಕ್ಕಾದೇವಿಯಿಂದ ಅಕ್ಕೇಶ್ವರ ದೇವರಿಗೆ ಕೊಟ್ಟ ಶಾಸನ ಮರ್ಯಾದೆಯ ಪುನರ್ಭರಣದ ಮಾಹಿತಿಯನ್ನು ತಿಳಿಸುತ್ತದೆ.

## ೧೦. ರಾಮಲಿಂಗ ದೇವಾಲಯ

೧೧-೧೨ನೇ ಶತಮಾನದ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ನಿರ್ಮಿತವಾದ ಎರಿಬ್ಯಾಲೇರಿಯ ರಾಮಲಿಂಗ[೧೯] ದೇವಾಲಯ ಗ್ರಾಮದ ದಕ್ಷಿಣಕ್ಕಿದ್ದು, ಪೂರ್ವಾಭಿಮುಖವಾಗಿದೆ. ದೇವಾಲಯವನ್ನು ದುರಸ್ತಿಗೊಳಿಸಲಾಗಿದ್ದು, ಹಳೆಯ ಅವಶೇಷಗಳಲ್ಲಿ ಎತ್ತರದ ಕಟ್ಟೆಯ ಮೇಲೆ ಚೌಕಾಕಾರದ ಪೀಠವುಳ್ಳ ಲಿಂಗ ಹಾಗೂ ಶಾಸನ ಶಿಲ್ಪ ಮಾತ್ರ ಉಳಿದುಕೊಂಡಿವೆ.

ರಾಮಲಿಂಗನ ಗುಡಿಯ ಸಮೀಪದಲ್ಲಿ ಕೆಲವು ಭಗ್ನಶಿಲ್ಪಗಳನ್ನು ಇಡಲಾಗಿದೆ. ಅವುಗಳಲ್ಲಿ ನಂದಿಶಿಲ್ಪ ಹಾಗೂ ನಾಗಬಂಧ ಶಿಲ್ಪಗಳು ಮತ್ತು ಒಂದು ನಾಟ್ಯ ಸ್ತ್ರೀಯ ಅಲಂಕೃತ ಶಿಲ್ಪವಿದೆ.

ಗುಡಿಯ ಮುಭಾಗದಲ್ಲಿ ಕ್ರಿ.ಶ.೧೦೪೫ರ ತೇದಿವುಳ್ಳ ಶಾಸನ[೨೦] ಶಿಲ್ಪವೊಂದಿದ್ದು, ಅದು ಪ್ರಕಟಗೊಂಡಿದೆ. ಕಲ್ಯಾಣ ಚಾಲುಕ್ಯ ಆರನೆ ವಿಕ್ರಮಾದಿತ್ಯನ ಕಾಲದ ಅತಿ ತ್ರುಟಿತವಾಗಿರುವ ಈ ಶಾಸನವು ಬೇಲೂರಿನ ಜೋಗೇಶ್ವರ ಮತ್ತು ಬೋಳೇಶ್ವರ ದೇವರಿಗೆ ಕೆಲವು ಗಾವುಂಡರು ಭೂಮಿಯನ್ನು ದಾನ ಮಾಡಿರುವ ಉಲ್ಲೇಖವಿದೆ. ಆದರೆ ಪ್ರಸ್ತುತ ಶಾಸನದಲ್ಲಿ ಉಲ್ಲೇಖಿತವಾದ ಜೋಗೇಶ್ವರ ಮತ್ತು ಬೋಳೇಶ್ವರ ದೇವಾಲಯಗಳು ಎರಿಬ್ಯಾಲೇರಿಯಲ್ಲಿರುವ ಬಗೆಗೆ ಖಚಿತ ಮಾಹಿತಿಗಳಿಲ್ಲ. ಆದರೆ ಶಾಸನದಲ್ಲಿ ಹೇಳಲಾಗಿರುವ ಬೇಲೂರು ಕ್ರಮೇಣ ಬ್ಯಾಲೂರು ಎಂದಾಗಿದ್ದು, ಹಾಗೂ ಗ್ರಾಮದ ಸುತ್ತಲಿನ ಪ್ರದೇಶವು ಎರೆಮಣ್ಣಿನಿಂದ ಕೂಡಿದ್ದರಿಂದ ಕಾಲಕ್ರಮೇಣ ಗ್ರಾಮಕ್ಕೆ ಎರಿಬ್ಯಾಲೇರಿ ಎಂಬ ಹೆಸರು ಬಂದಿರಬಹುದೆಂದು ಊಹಿಸಬಹುದು.

## ೧೧. ಕಲ್ಮೇಶ್ವರ ದೇವಾಲಯ

೧೧-೧೨ನೇ ಶತಮಾನದಲ್ಲಿ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ನಿರ್ಮಿತವಾದ ಕರಿಮಡಿ ಗ್ರಾಮದಲ್ಲಿರುವ ಕಲ್ಮೇಶ್ವರ[೨೧] ದೇವಾಲಯವು ಪೂರ್ವಾಭಿಮುಖವಾಗಿದ್ದು, ದೇವಾಲಯವನ್ನು ನವೀಕರಿಸಲಾಗಿದೆ. ಪ್ರಸ್ತುತ ದೇವಾಲಯವು ಗರ್ಭಗೃಹ ಹಾಗೂ ಮಂಟಪ ಭಾಗಗಳನ್ನು ಮಾತ್ರ ಒಳಗೊಂಡಿದೆ. ಪ್ರಾಚೀನ ಗರ್ಭಗೃಹವನ್ನು ಹಾಗೆಯೇ ಉಳಿಸಿಕೊಂಡಿದ್ದು, ಅದರಲ್ಲಿ ಚೌಕಾಕಾರದ ಪೀಠವುಳ್ಳ ಲಿಂಗ ಹಾಗೂ ಅದರ ಎದುರಿಗೆ ನಂದಿ ವಿಗ್ರಹವನ್ನಿಡಲಾಗಿದೆ. ಲಲಾಟದಲ್ಲಿ ಗಣಪತಿಯ ಉಬ್ಬು ಶಿಲ್ಪವಿದೆ. ದೇವಾಲಯದ ಹೊರಗೆ ಪ್ರಾಚೀನ ನಾಗಶಿಲ್ಪ ಹಾಗೂ ಗಣಪತಿಯ ಶಿಲ್ಪಗಳನ್ನು ನಿಲ್ಲಿಸಲಾಗಿದೆ.

ಇದೇ ಗ್ರಾಮದಲ್ಲಿ ಸೋಮೇಶ್ವರ ಹಾಗೂ ಹನುಮಂತ ಎಂಬ ಇನ್ನೂ ಎರಡು ಪ್ರಾಚೀನ ದೇವಾಲಯಗಳಿದ್ದವು. ಆದರೆ ಅವುಗಳನ್ನು ಸಹ ಇಂದು ನವೀಕರಿಸಲಾಗಿದೆ. ಎರಡು ದೇವಾಲಯಗಳು ಗರ್ಭಗೃಹ ಹಾಗೂ ಮಂಟಪ ಭಾಗಗಳನ್ನು ಹೊಂದಿವೆ. ಸೋಮೇಶ್ವರ ದೇವಾಲಯದ ಆವರಣದಲ್ಲಿ ಎರಡು ಶಾಸನಗಳನ್ನು ನಿಲ್ಲಿಸಲಾಗಿದೆ. ಹಾಗೂ ಹನುಮಂತ ದೇವಾಲಯದ ಆವರಣದಲ್ಲಿ ಪ್ರಾಚೀನ ದೇವಾಲಯದ ಚೌಕಾಕಾರಟ ಪೀಠವುಳ್ಳ ಎರಡು ಲಿಂಗಗಳು ಹಾಗೂ ದೊಡ್ಡ ಗಾತ್ರದ ನಂದಿಯ ವಿಗ್ರಹಗಳನ್ನು ಒಂದೆಡೆ ಸಂರಕ್ಷಿಸಿ ಇಡಲಾಗಿದೆ. ಹಾಗೆಯೇ ಒಂದೆರಡು ವೀರಗಲ್ಲು ಹಾಗೂ ಮಾಸ್ತಿಕಲ್ಲುಗಳು ಗ್ರಾಮದಲ್ಲಿ ಕಾಣಸಿಗುತ್ತವೆ.

ಕರಮಡಿ ಗ್ರಾಮಕ್ಕೆ ಸಂಬಂಧಿಸಿದ ಮೂರು ಶಾಸನಗಳು[೨೨] ಪ್ರಕಟಗೊಂಡಿವೆ. ರಾಷ್ಟ್ರಕೂಟ ಕಾಲದ ಎರಡು ಶಾಸನಗಳು ದೊರಕಿದ್ದು, ಒಂದು ಶಾಸನವು ತ್ರುಟಿತಗೊಂಡಿದ್ದು, ಯಾವುದೇ ಮಾಹಿತಿ ಲಭ್ಯವಾಗಿಲ್ಲ. ಇನ್ನೊಂದು ಶಾಸನವು ಕಾರೆಮಡಿಯ ಮಹಾಜನರು ವಿದ್ಯೆ ಮೊದಲವುಗಳಿಗಾಗಿ ಈಶಾನರಾಶಿ ಭಟಾರನ ದೇವಾಲಯಕ್ಕೆ ನೀಡಿದ ದಾನ ಉಲ್ಲೇಖವನ್ನು ಹೊಂದಿದೆ. ಕಲ್ಯಾಣ ಚಾಲುಕ್ಯ ಒಂದನೇ ಸೋಮೇಶ್ವರನ ಕಾಲದ ಕ್ರಿ.ಶ. ೧೦೫೪ರ ತೇದಿಯುಳ್ಳ ಶಾಸನವು ಒಬ್ಬಲೇಶ್ವರ ದೇವಾಲಯದ ಸತ್ರಕ್ಕೆ ಗಂಗೆಯಬೇಯನಿಂದ ಹಣದಾನ ನೀಡಿರುವ ಮಾಹಿತಿಯನ್ನು ತಿಳಿಸುತ್ತದೆ.

## ೧೨. ಚಂದ್ರಮೌಳೇಶ್ವರ ದೇವಾಲಯ

ನರೇಗಲ್ ಗ್ರಾಮದ ಹೊರಭಾಗದಲ್ಲಿ ಹಾಗೂ ಕೋಡಿಕೊಪ್ಪಕ್ಕೆ ಹೋಗುವ ಮಾರ್ಗದಲ್ಲಿ ೧೧-೧೨ನೇ ಶತಮಾನಕ್ಕೆ ಸೇರಿದ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ

ಚಂದ್ರಮೌಳೇಶ್ವರ[೨೩] ದೇವಾಲಯವನ್ನು ನಿರ್ಮಿಸಲಾಗಿದೆ. ಇದು ಕೆಂಪು ಮರಳು ಶಿಲೆಯಿಂದ ಕಟ್ಟಲ್ಪಟ್ಟಿದೆ. ಪ್ರಸ್ತುತದಲ್ಲಿ ಪ್ರಾಚೀನ ದೇವಾಲಯದ ನವರಂಗ ಬಿದ್ದಿದ್ದು ಗರ್ಭಗೃಹ ಹಾಗೂ ಅಂತರಾಳ ಭಾಗಗಳು ಮಾತ್ರ ಉಳಿದುಕೊಂಡಿವೆ. ಚೌಕಾಕಾರದ ಗರ್ಭಗೃಹದಲ್ಲಿ ಲಿಂಗವಿದ್ದು ಭುವನೇಶ್ವರಿಯನ್ನು ಕಾಣಬಹುದು. ಬಾಗಿಲವಾಡವು ತ್ರಿಪಟ್ಟಿಕೆಯನ್ನು ಹೊಂದಿದ್ದು ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವನ್ನು ಒಳಗೊಂಡಿದೆ. ಅಂತರಾಳದ ಮುಂದಿನ ಭಾಗವಾದ ನವರಂಗವು ಸುಂದರ ಕೆತ್ತನೆಯ ಭುವನೇಶ್ವರಿಯನ್ನು ಹೊಂದಿದ್ದು, ಎರಡು ತಿರುಗುಣಿಯ ಕಂಬಗಳು ಮಾತ್ರ ಉಳಿದುಕೊಂಡಿವೆ. ದೇವಾಲಯಕ್ಕೆ ಸರಳ ಅಧಿಷ್ಠಾನವಿದ್ದು ಆಲಂಕೃತ ಭಿತ್ತಿಯನ್ನು ಒಳಗೊಂಡಿದೆ. ಭಿತ್ತಿಯಲ್ಲಿ ಸುಂದರ ಕೆತ್ತನೆಗಳನ್ನೊಳಗೊಂಡ ಕೋಷ್ಠಕಗಳನ್ನು ಕಂಡಿರಿಸಿದ್ದಾರೆ. ಅಲ್ಲದೆ ಗೋಡೆ ಗಂಬಗಳನ್ನೂ ಕಾಣಬಹುದು. ಶಿಖರಭಾಗವು ಭಾಗಶಃ ನಾಶವಾಗಿದ್ದು, ಕೇವಲ ಒಂದು ತಲವನ್ನು ಕಾಣಬಹುದಾಗಿದ್ದು ಅದು ಸಹ ನಾಶಸ್ಥಿತಿಯಲ್ಲಿದೆ.

## ೧೩. ರಾಮಲಿಂಗ ದೇವಾಲಯ

ಬೊಮ್ಮಸಾಗರ ಗ್ರಾಮದಲ್ಲಿ, ಊರ ಹೊರಗೆ ಇರುವ ಹೊಲಗಳ ಮಧ್ಯದಲ್ಲಿ ೧೧-೧೨ನೇ ಶತಮಾನಕ್ಕೆ ಸೇರುತ್ತದನ್ನೆಲಾದ ರಾಮಲಿಂಗ ದೇವಾಲಯವು[೨೪] ಕಂಡುಬರುತ್ತದೆ. ಇದು ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿ ನಿರ್ಮಿತವಾಗಿದ್ದು, ಪೂರ್ವಾಭಿಮುಖವಾಗಿದೆ.

ಚೌಕಾಕಾರದ ತಲನಕ್ಷೆಯನ್ನು ಹೊಂದಿರುವ ದೇವಾಲಯವು ಬಿಳಿಮಿಶ್ರಿತ ಶಿಲೆಯಿಂದ ನಿರ್ಮಿಸಲ್ಪಟ್ಟಿದೆ. ತಿರ್ಯಙ್ಮುಖ ಕ್ರಮದಲ್ಲಿ ಗರ್ಭಗೃಹ, ಅಂತರಾಳ ಹಾಗೂ ವಿಶಾಲವಾದ ನವರಂಗದ ಭಾಗಗಳನ್ನು ಒಳಗೊಂಡಿದೆ. ದೇವಾಲಯದ ಗರ್ಭಗೃಹ ಬರಿದಾಗಿದ್ದು ಬಾಗಿಲವಾಡವು ಪಂಚಪಟ್ಟಿಕೆಯಿಂದ ಅಲಂಕೃತವಾಗಿದೆ. ಲಲಾಟದಲ್ಲಿ ಗಣಪತಿಯ ಶಿಲ್ಪವನ್ನು ಕಂಡಿರಿಸಿದ್ದಾರೆ. ಅಲ್ಲದೆ ಅಂತರಾಳ ಭಾಗವಿದ್ದ ಅದು ಕೂಡ ಬರಿದಾಗಿದೆ. ಬಾಗಿಲವಾಡವು ಅಲಂಕೃತವಾಗಿದ್ದು, ನವರಂಗದಲ್ಲಿ ಎರಡು ಕೊಷ್ಟಗಳಿದ್ದವೆಂದು ಗುರುತಿಸಬಹುದು. ಆದರೆ ಪ್ರಸ್ತುತದಲ್ಲಿ ಅವುಗಳು ಭಗ್ನಾವಸ್ಥೆಯಲ್ಲಿದ್ದು ಬರಿದಾಗದೆ. ನವರಂಗದಲ್ಲಿ ಸುಂದರವಾದ ಭುವನೇಶ್ವರಿಯಿದ್ದು ಕಲ್ಯಾಣ ಚಾಲುಕ್ಯ ಶೈಲಿಯ ನಾಲ್ಕು ಕಂಬಗಳಿವೆ. ಇವುಗಳು ಕೆಳಗೆ ಚೌಕಾಕಾರವಾಗಿದ್ದು ಕುಂಭ, ಫಲಕ ಹಾಗೂ ಬೋಧಿಗೆಗಳನ್ನೂ ಒಳಗೊಂಡಿದೆ. ಅಲ್ಲದೆ ಈ ನವರಂಗ ಭಾಗದಲ್ಲಿ ಭಗ್ನಗೊಂಡ ಕೆಲವು ಬಿಡಿಶಿಲ್ಪಗಳನ್ನು ಕಾಣಬಹುದು. ದೇವಾಲಯದ ಪ್ರವೇಶದ್ವಾರವು ಸರಳವಾಗಿದೆ. ಸರಳ ಅಧಿಷ್ಠಾನದಲ್ಲಿ ನಿರ್ಮಾಣವಾದ ದೇವಾಲಯ ಗೋಡಗಂಬಗಳನ್ನೊಂಡಿರುವ ಭಿತ್ತಿ ಹೊಂದಿದ್ದು, ಶಿಖರ ಬಾಗವು ಸಂಪೂರ್ಣವಾಗಿ ನಾಶವಾಗಿದೆ.

ಈ ದೇವಾಲಯದ ಸ್ವಲ್ಪ ದೂರದಲ್ಲಿ ಮತ್ತೊಂದು ದೇವಾಲಯವಿದೆ. ಇದನ್ನೂ ಕೂಡ ರಾಮಲಿಂಗ ದೇವಾಲಯ ಎಂದು ಸ್ಥಳೀಯರು ಕರೆಯುತ್ತಾರೆ. ಇದು ಸಹ ಗರ್ಭಗೃಹ, ಅಂತರಾಳ ಹಾಗೂ ನವರಂಗ ಭಾಗಗಳನ್ನು ಹೊಂದಿದೆ. ಆದರೆ ಪ್ರಸ್ತುತದಲ್ಲಿ ಎಲ್ಲ ಭಾಗಗಳು ಬಿದ್ದು ಹೋಗಿವೆ. ಇಂದು ಕುರುಹುಗಳನ್ನಷ್ಟೆ ಕಾಣಬಹುದುದಾಗಿದೆ. ಅಲ್ಲದೆ ಪ್ರವೇಶ ದ್ವಾರದ ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವನ್ನು ಕೆತ್ತಲಾಗಿದೆ. ಪ್ರಸ್ತುತ ಈ ಎರಡೂ ದೇವಾಲಯಗಳು ಭಾಗಶಃ ನಾಶಗೊಂಡಿವೆ. ಈ ದೇವಾಲಯಗಳ ಮುಂದೆ ಪಾರ್ವತಿ ಎಂಬ ಕೊಳ್ಳವೊಂದು ಹರಿಯುತ್ತಿದ್ದು ಅದರ ದಡದಲ್ಲಿ ಒಂದು ಮಹಾಸತಿ ಕಲ್ಲು ಇರುವುದು.

ಕೆವು ವರ್ಷಗಳ ಹಿಂದೆಯೇ ಈ ದೇವಾಲಯಗಳ ಅಕ್ಕಪಕ್ಕದ ಸ್ಥಳದಲ್ಲಿ ಜನವಸತಿ ಇದ್ದು ಹುಲ್ಲೂರು ಗ್ರಾಮವೆಂದೆನಿಸಿಕೊಂಡಿತ್ತು. ಆದರೆ ಪ್ರಸ್ತುತದಲ್ಲಿ ಇಲ್ಲಿ ಜನವಸತಿ ಇಲ್ಲವಾಗಿದ್ದು, ಅಂದಿನ ಕುರುಹುಗಳನ್ನಷ್ಟೆ ಕಾಣಬಹುದಾಗಿದೆ. ಈ ದೇವಾಲಯಗಳ ಕುರಿತಾಗಿ ಯಾವುದೇ ಲಿಖಿತಗಳು ಲಭ್ಯವಾಗಿಲ್ಲ.

## ೧೪. ಈಶ್ವರ ದೇವಾಲಯ

ರೋಣ ಪಟ್ಟಣದ ಗೌಡರ ಓಣಿಯಲ್ಲಿರುವ ಈಶ್ವರ ದೇವಾಲಯವನ್ನು[೨೫] ೧೧-೧೨ನೇ ಶತಮಾನದಲ್ಲಿ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ನಿರ್ಮಿಸಲಾಗಿದೆ. ಇದು ಪೂರ್ವಾಭಿಮುಖವಾಗಿದ್ದು ಕಪ್ಪು ಶಿಲೆಯಲ್ಲಿ ನಿರ್ಮಿತಗೊಂಡಿದೆ.

ದೇವಾಲಯವು ಚೌಕಾಕಾರವಾದ ತಲ ನಕ್ಷೆಯನ್ನು ಹೊಂದಿದ್ದು ತಿರ್ಯಙ್ಮುಖ ಕ್ರಮದಲ್ಲಿ ಗರ್ಭಗೃಹ, ಅಂತರಾಳ ಹಾಗು ನವರಂಗಗಳನ್ನು ಒಳಗೊಂಡಿದೆ. ಅಲ್ಲದೆ ಮುಖ ಮಂಟಪ ವನ್ನು ಹೊಂದಿರಬಹುದಾದ ಲಕ್ಷಣಗಳನ್ನು ಗುರುತಿಸಬಹುದು. ಗರ್ಭಗೃಹದಲ್ಲಿ ಎತ್ತರದ ಚೌಕಾಕಾರದ ಪೀಠದ ಮೇಲೆ ವೃತ್ತಾಕಾರದ ರುದ್ರಭಾಗವುಳ್ಳ ಲಿಂಗವಿದ್ದು, ಸುತ್ತಲೂ ಅರ್ಧಗಂಬಗಳ ರಚನೆಯನ್ನು ಹೊಂದಿದೆ. ಈ ಚೌಕಾಕಾರದ ಅರ್ಧಕಂಬಗಳು ಸಾದಾ ರಚನೆಯುಳ್ಳವುಗಳಾಗಿದ್ದು, ಬೋದಿಗೆಯ ಜೋಡಣೆಯನ್ನು ಅಳವಡಿಸಲಾಗಿದೆ. ಅಲ್ಲದೆ ಕಂಬಗಳ ನಡುವೆ ಮೂರು ಭಿತ್ತಿಗಳಲ್ಲಿ ಕೋಷ್ಟಗಳ ರಚನೆಯನ್ನು ಕಾಣಬಹುದು. ಬಾಗಿಲವಾಡವು ತ್ರಿಪಟ್ಟಿಕೆಯನ್ನು ಒಳಗೊಂಡಿದ್ದು, ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ದೇವಾಲಯದ ಹೊರಭಾಗದಲ್ಲಿ ಎತ್ತರದ ಕಟ್ಟೆಯ ಮೇಲೆ ಕಪ್ಪುಶಿಲೆಯಲ್ಲಿ ಸುಂದರ ಕೆತ್ತನೆಯ ಬೃಹತ್ ನಂದಿ ಶಿಲ್ಪವಿದೆ. ಈ ನಂದಿಶಿಲ್ಪವು ಗಾತ್ರದಲ್ಲಿ ದೊಡ್ಡದಿದ್ದು ಕೊರಳಹಾರ

ಹಾಗೂ ಗಂಟೆಗಳ ಕೆತ್ತನೆಯನ್ನೊಳಗೊಂಡ ಹಾರದ ರಚನೆಯನ್ನು ಹೊಂದಿದೆ. ಅಲ್ಲದೆ ಇದು ಕುಳಿತಿರುವ ಭಂಗಿಯನ್ನು ಅತ್ಯಂತ ಸಹಜ ಸ್ಥಿತಿಯಲ್ಲಿ ಕೆತ್ತಲಾಗಿದ್ದು, ನೋಡಲು ಆಕರ್ಷಕವಾಗಿದೆ. ಇದರ ಪಾದಗಳಡಿಯಲ್ಲಿ ಗೆಜ್ಜೆಗಳ ಕೆತ್ತನೆಯನ್ನೂ ಕಾಣಬಹುದು. ದೇವಾಲಯವು ಸರಳ ಅಧಿಷ್ಠಾನವನ್ನು ಹೊಂದಿದ್ದು, ಹೊರಭಿತ್ತಿಯು ಅಲಂಕೃತ ಗೋಡೆಗಂಬಗಳ ಕೆತ್ತನೆಗಳಿಂದೊಡಗೂಡಿದೆ. ಪ್ರಸ್ತುತದಲ್ಲಿ ದೇವಾಲಯದ ಹೊರ ಭಿತ್ತಿಯು ಕನಿಷ್ಠ ಸ್ಥಿತಿಯಲ್ಲಿದ್ದು ಸವೆದು ಹೋಗುತ್ತಿದೆ. ಶಿಖರ ಭಾಗವೂ ಭಾಗಶಃ ನಾಶಗೊಂಡಿದ್ದು, ಸದ್ಯ ಎರಡು ತಲಗಳ ರಚನೆಯನ್ನು ಕಾಣಬಹುದು. ದೇವಾಲಯದ ಮುಂಭಾಗದಲ್ಲಿ ಅಪ್ರಕಟಿತ ವೀರಗಲ್ಲು ಶಾಸನ ಶಿಲ್ಪವೊಂದನ್ನು ನಿಲ್ಲಿಸಲಾಗಿದೆ. ಶಾಸನ ತಜ್ಞರ ಪ್ರಕಾರ ಈ ಶಾಸನ ಶಿಲ್ಪವು ರಾಷ್ಟ್ರಕೂಟ ಅವಧಿಯ ಸುಂದರವಾದ ವೀರಗಲ್ಲು ಹಾಗೂ ಪ್ರಮುಖವಾದುದು ಈ ಶಾಸನದಲ್ಲಿ ಉಲ್ಲೇಖಿತ ರಾಷ್ಟ್ರಕೂಟ ಅರಸ ಕನ್ನರನು ಮೂರನೇ ಕೃಷ್ಣನಲ್ಲ. ಈತ ಮೂರನೇ ಕೃಷ್ಣನ ನಂತರ ಆಳ್ವಿಕೆಗೆ ಬಂದ ಖೊಟ್ಟಿಗನ ಮಗ ಎಂದು ಈ ಶಾಸನ ತಿಳಿಸುತ್ತದೆ. ಅಲ್ಲದೆ ಕ್ರಿ.ಶ.೯೭೦ರವರೆಗೂ ರಾಷ್ಟ್ರಕೂಟರು ಅಧಿಕಾರದಲ್ಲಿದ್ದರೆಂಬ ಪ್ರಮುಖವಾದ ಮಾಹಿತಿಯನ್ನು ನೀಡುತ್ತದೆ.[೨]

## ೧೫. ದೊಡ್ಡಲಿಂಗೇಶ್ವರ ದೇವಾಲಯ

ಸವಡಿಯ ಈ ದೊಡ್ಡ ಲಿಂಗೇಶ್ವರ ದೇವಾಲಯವನ್ನು[೨] ಗ್ರಾಮದ ಈಶಾನ್ಯಕ್ಕೆ ೧೧-೧೨ನೇ ಶತಮಾನದಲ್ಲಿ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ.

ಚೌಕಾಕಾರದ ತಲವಿನ್ಯಾಸವನ್ನು ಹೊಂದಿರುವ ದೇವಾಲಯವು ತಿರ್ಯಙ್ಮುಖವಾಗಿ ಗರ್ಭಗೃಹ, ಅಂತರಾಳ, ಹಾಗೂ ನವರಂಗ ಭಾಗಗಳನ್ನು ಹೊಂದಿದ್ದು, ಅಂತರಾಳ ಮತ್ತು ನವರಂಗ ಭಾಗಗಳನ್ನು ದುರಸ್ತಿಗೊಳಿಸಲಾಗಿದೆ. ಗರ್ಭಗೃಹದಲ್ಲಿ ನಕ್ಷತ್ರಾಕಾರದ ಪೀಠವುಳ್ಳ ಲಿಂಗ ಹಾಗೂ ಚೌಕಾಕಾರದ ಪೀಠವುಳ್ಳ ಎರಡು ಲಿಂಗಗಳಿದ್ದು ಭುವನೇಶ್ವರಿಯ ಕೆತ್ತನೆಯನ್ನೊಳಗೊಂಡಿದೆ. ಅಲ್ಲದೆ ಸದಾ ಬಾಗಿಲವಾಡವನ್ನು ಹೊಂದಿದ್ದು, ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪ ಕೆತ್ತನೆಯನ್ನೊಳಗೊಂಡಿದೆ. ಅಂತರಾಳದಲ್ಲಿ ನಂದಿ ವಿಗ್ರಹ ಹಾಗೂ ಉಮಾಮಹೇಶ್ವರನ ಶಿಲ್ಪವನ್ನು ಇಡಲಾಗಿದೆ. ಉಮಾಮಹೇಶ್ವರರ ಆಲಿಂಗನ ಶಿಲ್ಪವು ವಿಶಿಷ್ಟ ಕೇಶಾಲಂಕಾರ, ಸುಂದರ ವಸ್ತ್ರಾಭರಣಗಲನ್ನು ಧರಿಸಿದ್ದು, ಎಡ ಮತ್ತು ಬಲ ಭಾಗದಲ್ಲಿ ಗಣೇಶ ಮತ್ತು ಷಣ್ಮುಖರ ಉಬ್ಬುಶಿಲ್ಪಗಳಿವೆ. ಎತ್ತರದ ಕಟ್ಟೆಯ ಮೇಲೆ ನಿರ್ಮಾಣಗೊಂಡಿರುವ ದೇವಾಲಯದ ಅಧಿಷ್ಠಾನ ಭಾಗವು ಕಾಣಸಿಗುವುದಿಲ್ಲ. ಹೊರಬಿತ್ತಿಯು ಸರಳವಾಗಿದ್ದು, ಎಡ ಭಾಗದಲ್ಲಿ ಗುರುತಿಸಲಾಗದ ಮಂಗನಾಕಾರದ ಶಿಲ್ಪವನ್ನು ಕಾಣಬಹುದಾಗಿದೆ.

ದೇವಾಲಯದ ಶಿಖರ ಭಾಗವನ್ನು ಇಟ್ಟಿಗೆಯಿಂದ ನಿರ್ಮಿಸಲಾಗಿದ್ದು ಇಂದು ನಾಶ ಸ್ಥಿತಿಯಲ್ಲಿದೆ. ದೇವಾಲಯದ ಆವರಣದಲ್ಲಿ ಭಗ್ನಗೊಂಡಿರುವ ಅನಂತಶಯನನ ಶಿಲ್ಪ ನಂದಿಶಿಲ್ಪಗಳು ಹಾಗು ಮಹಿಷಾಸುರಮರ್ದಿನಿಯ ಶಿಲ್ಪವನ್ನು ಇಡಲಾಗಿದೆ. ಅಲ್ಲದೆ ಸೂರ್ಯ ಶಿಲ್ಪರಹಿತ ಪೀಠ ಭಾಗವನ್ನೂ ಹಾಗೂ ದೇವಾಲಯದ ಇನ್ನೂ ಕೆಲವು ಅವಶೇಷಗಳನ್ನು ಕಾಣಬಹುದು.

## ೧೬. ಜೋಡು ಕಲಶ ದೇವಾಲಯ

ಸೂಡಿ ಗ್ರಾಮದ ದಕ್ಷಿಣದಲ್ಲಿರುವ ಹಾಗೂ ವಾಸ್ತುಶಿಲ್ಪ ವೈಶಿಷ್ಟವನ್ನು ಹೊಂದಿರುವ ಮತ್ತೊಂದು ದೇವಾಲಯ ಜೋಡು ಕಲಶ ದೇವಾಲಯ.[೨೮] ಇದು ಪೂರ್ವಾಭಿಮುಖವಾಗಿದ್ದು ೧೧-೧೨ನೇ ಶತಮಾದ ಕಲ್ಯಾಣ ಚಾಲುಕ್ಯರ ಕಾಲದಲ್ಲಿ, ರಾಷ್ಟ್ರಕೂಟ ಶೈಲಿಯಲ್ಲಿ ಹಾಗೂ ಮರಳು ಶಿಲೆಯಲ್ಲಿ ನಿರ್ಮಿತವಾದ ದೇವಾಲಯವಾಗಿದೆ.

ಈ ದೇವಾಲಯವು ಎತ್ತರದ ಕಟ್ಟೆಯ ಮೇಲೆ ನಕ್ಷತ್ರಾಕಾರದ ತಲವಿನ್ಯಾಸವನ್ನಿರಿಸಿಕೊಂಡು ರಚಿತವಾಗಿದೆ. ಪೂರ್ವ–ಪಶ್ಚಿಮಾಭಿಮುಖವಾಗಿರುವ ಎರಡು ಗರ್ಭಗೃಹಗಳು ಅಂತರಾಳಗಳು ಹಾಗೂ ಎರಡೂ ಗರ್ಭಗೃಹಗಳನ್ನೊಳಗೊಂಡಂತೆ ವಿಶಾಲವಾದ ನವರಂಗವು ಎರಡು ಕಡೆಗಳಲ್ಲಿ ಪ್ರವೇಶವನ್ನು ಹೊಂದಿದ್ದು ಇದೊಂದು ದ್ವಿಕೂಟಾಚಲ ದೇವಾಲಯವಾಗಿದೆ.

ಪೂರ್ವಾಭಿಮುಖ ಗರ್ಭಗೃಹದಲ್ಲಿ ನಕ್ಷತ್ರಾಕಾರದ ಸುಂದರ ಕೆತ್ತನೆಯುಳ್ಳ ಲಿಂಗವಿದೆ. ಇದು ಪೀಠದಿಂದ ಮೇಲ್ಭಾಗದವರೆಗೂ ವಿಶಿಷ್ಠ ನಕ್ಷತ್ರಾಕಾರದ ರಚನೆಯನ್ನೊಳಗೊಂಡಿದೆ. ಈ ಗರ್ಭಗೃಹದಲ್ಲಿ ಒಳಗೋಡೆಯಲ್ಲಿ ಮೂರು ಕೋಷ್ಟಗಳಿವೆ. ಮೂರು ಕೋಷ್ಟಗಳು ಯಾಳೀ ಕೆತ್ತನೆಯಿಂದ ಕೂಡಿದ್ದು ಕೀರ್ತಿಮುಖದ ಅಲಂಕಾರವನ್ನು ಹೊಂದಿದೆ. ಹಾಗೂ ಪ್ರತಿ ಕೊಷ್ಟದ ಲಲಾಟದಲ್ಲಿ ಬ್ರಹ್ಮ, ವಿಷ್ಣು ಹಾಗೂ ಶಿವನ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಈ ಶಿಲ್ಪಗಳು ಆಯುಧಧಾರಿಗಳಾಗಿವೆ. ಒಳ ಮೇಲ್ಛಾವಣಿಯಲ್ಲಿ ಕಮಲ ಪುಷ್ಪಮಾದರಿಯ ಸುಂದರ ಕೆತ್ತನೆಯ ಭುವನೇಶ್ವರಿಯಿದೆ. ಗರ್ಭಗೃಹದ ಬಾಗಿಲವಾಡವು ತ್ರಿಪಟ್ಟಿಕೆಗಳನ್ನು ಹೊಂದಿದ್ದು ಗಜಲಕ್ಷ್ಮಿಯ ಉಬ್ಬುಶಿಲ್ಪದ ರಚನೆಯಿದೆ. ಪಟ್ಟಿಕೆಯ ಸುತ್ತಲೂ ಬಳ್ಳಿಯಾಕಾರದ ಕೆತ್ತನೆಯಿದೆ. ಈ ಗರ್ಭಗೃಹಕ್ಕೆ ತೆರೆದ ಅಂತರಾಳವಿದ್ದು ಇದರ ತೋರಣವನ್ನು ಯಾಳಿ ಹಾಗೂ ಕೀರ್ತಿಮುಖದ ಕೆತ್ತನೆಯಿಂದ ಸುಂದರಗೊಳಿಸಲಾಗಿದೆ. ತೋರಣದ ಮಧ್ಯ ಭಾಗದಲ್ಲಿ ತ್ರಿಶೂಲ ಹಾಗೂ ಡಮರುಧಾರಿ ಶಿವನ ಶಿಲ್ಪವನ್ನು ಕಂಡರಿಸಿದ್ದು, ಈ ಶಿಲ್ಪದ ಇಕ್ಕೆಲಗಳಲ್ಲಿ ಗಣೇಶ ಹಾಗೂ ಮಯೂರ ವಾಹನ ರೂಢನಾದ ಷಣ್ಮುಖನ ಉಬ್ಬುಶಿಲ್ಪಗಳನ್ನು

ಕೆತ್ತಲಾಗಿದೆ. ಈ ಗರ್ಭಗೃಹಕ್ಕೆ ಎದುರಾಗಿ ನವರಂಗದಲ್ಲಿ ಸುಂದರ ಕೆತ್ತನೆಯ, ಎತ್ತರದ ಗಂಟೆಯಹಾರವುಳ್ಳ ನಂದಿಯ ವಿಗ್ರಹವನ್ನಿಡಲಾಗಿದೆ.

ಪಶ್ಚಿಮಾಭಿಮುಖ ಗರ್ಭಗೃಹದಲ್ಲಿ ಯಾವುದೇ ವಿಗ್ರಹಗಳಿಲ್ಲ. ಗರ್ಭಗೃಹದ ಒಳಗೋಡೆಯಲ್ಲಿ ಮೂರು ಕೋಷ್ಠಗಳ ರಚನೆಯಿದೆ ಅಲ್ಲದೆ ಈ ಕೋಷ್ಠಗಳನ್ನು ಅರ್ಧಕಂಬ, ಯಾಳಿ ಹಾಗೂ ಲಕ್ಷ್ಮೀ ಶಿಲ್ಪಗಳಿಂದ ಸುಂದರಗೊಳಿಸಲಾಗಿದೆ. ಈ ಕೋಷ್ಠಗಳ ಲಲಾಟದಲ್ಲಿ ಕೈಯಲ್ಲಿ ಹೂಗಳನ್ನು ಹಿಡಿದು ಕುಳಿತಿರುವ ಲಕ್ಷ್ಮಿಯ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಗರ್ಭಗೃಹದ ಒಳಭಾಗದ ನಾಲ್ಕು ಮೂಲೆಗಳಲ್ಲಿ ಅರ್ಧಕಂಬಗಳಿವೆ. ಅವುಗಳಿಗೆ ಬೋಧಿಗೆಗಳನ್ನು ಅಳವಡಿಸಲಾಗಿದೆ. ಗರ್ಭಗೃಹದ ಒಳ ಮೇಲ್ಛಾವಣಿಯಲ್ಲಿ ಸುಂದರ ಭುವನೇಶ್ವರಿಯ ಕೆತ್ತನೆಯಿದೆ. ಬಾಗಿಲವಾಡವು ತ್ರಿಪಟ್ಟಿಕೆಯಿಂದ ಕೂಡಿದ್ದು, ಮಧ್ಯದಲ್ಲಿ ಗಜಲಕ್ಷ್ಮೀಯ ಉಬ್ಬುಶಿಲ್ಪವಿದೆ. ಸುತ್ತಲೂ ಬಳ್ಳಿಯಾಕಾರದ ರಚನೆಯಿದೆ. ಈ ಗರ್ಭಗೃಹಕ್ಕೆ ತೆರೆದ ಅಂತರಾಳವಿದ್ದು, ಇದರ ಬಾಗಿಲವಾಡದ ಮೇಲಿನ ಚೌಕಟ್ಟು ಯಾಳಿ ಹಾಗೂ ಕೀರ್ತಿಮುಖ ಕೆತ್ತನೆಗಳಿಂದ ಕೂಡಿದೆ. ತೋರಣ ಅಲಂಕಾರದ ಮಧ್ಯೆ ಎರಡು ಕೈಗಳಲ್ಲಿ ಕಮಲ ಪುಷ್ಪ ಹಿಡಿದು ನಿಂತಿರುವ ಸೂರ್ಯನ ಉಬ್ಬುಶಿಲ್ಪವಿದೆ. ಸೂರ್ಯನ ಉಬ್ಬುಶಿಲ್ಪದ ಇಕ್ಕೆಲಗಳಡಿಯಲ್ಲಿ ಕೈಯಲ್ಲಿ ಕಮಲದ ಹೂವನ್ನು ಹಿಡಿದು ಕುಳಿತಿರುವ ಎರಡು ಚಿಕ್ಕ ಶಿಲ್ಪಗಳಿವೆ.

ಎರಡು ಗರ್ಭಗೃಹಗಳನ್ನು ಒಳಗೊಂಡಂತೆ ವಿಶಾಲವಾದ ಸುಮಾರು ೨೦ ಕಂಬಗಳನ್ನು ಹೊಂದಿದ ನವರಂಗವಿದೆ. ಇಲ್ಲಿರುವ ಕಂಬಗಳು ತಿರುಗಣೆಯ ಕಂಬಗಳಾಗಿದ್ದು, ಮಧ್ಯದಲ್ಲಿ ಗಂಟೆಯಾಕಾರದ ರಚನೆ ಹೊಂದಿದೆ. ಸುಂದರವಾದ ಬೋಧಿಗೆಗಳನ್ನು ಈ ಕಂಬಗಳಿಗೆ ಅಳವಡಿಸಲಾಗಿದೆ. ಈ ನವರಂಗದಲ್ಲಿ ಕಕ್ಷಾಸನವಿದ್ದು ಇದರಲ್ಲೂ ಕೂಡ ಕಂಬಗಳನ್ನು ಅಳವಡಿಸಲಾಗಿದೆ ನವರಂಗಕ್ಕೆ ಎರಡೂ ಕಡೆಗಳಲ್ಲಿ ಪ್ರವೇಶದ್ವಾರಗಳಿವೆ.

ಅಧಿಷ್ಠಾನವು ಉಪಾನ, ಜಗತಿ, ಗಳ, ತ್ರಿಪಟ್ಟ ಕುಮುದ ಹಾಗೂ ಕಪೋತ ಭಾಗಗಳನ್ನು ಹೊಂದಿದೆ. ದೇವಾಲಯದ ಹೊರಭಿತ್ತಿಯು ಅಲಂಕಾರದಿಂದ ಕೂಡಿದೆ. ಇದು ಅರ್ಧ ಕಂಬಗಳ ರಚನೆ, ಮೂರು ಪಟ್ಟಿಕೆಯುಳ್ಳ ಕಂಬಗಳು ಹಾಗೂ ಶಿಖರವುಳ್ಳ ಅರ್ಧಮಂಟಪಗಳ ಕೆತ್ತನೆಯನ್ನು ಒಳಗೊಂಡಿದೆ. ಎರಡು ಶಿಖರಗಳು ಐದು ತಲಗಳನ್ನು ಹೊಂದಿದ ವೇಸರ ಮಾದರಿಯ ಶಿಖರಗಳಾಗಿವೆ. ಶಾಸನಗಳಲ್ಲಿ ಇದನ್ನು ನಾಗೇಶ್ವರ ದೇವಾಲಯವೆಂದು ಕರೆಯಲಾಗಿದೆ.

ದೇವಾಲಯಕ್ಕೆ ಸಂಬಂಧಿಸಿದಂತೆ ಎರಡು ಶಾಸನಗಳು[೫] ಪ್ರಕಟವಾಗಿದೆ. ದೇವಾಲಯದ ನವರಂಗದಲ್ಲಿ ನಿಲ್ಲಿಸಿರುವ ಕಲ್ಯಾಣ ಚಾಲುಕ್ಯ ಅರಸ ಐದನೇ ವಿಕ್ರಮಾದಿತ್ಯನ ಕ್ರಿ.ಶ.೧೦೧೦

ತೇದಿವುಳ್ ಳ ಶಾಸನವು ಅಕ್ಕಾದೇವಿ ಕಿಸುಕಾಡನ್ನು ಆಳುತ್ತಿದ್ದಾಗ ಸೂಡಿಯ ಗಾವುಂಡ ಹಾಗೂ ಸೆಟ್ಟಿಯರ ಸಮ್ಮುಖದಲ್ಲಿ ಬ್ರಹ್ಮಪುರಿಯ ಮಹಾಜನರಿಗೆ ಭೂಮಿ ಒಪ್ಪಿಸಿದ ಉಲ್ಲೇಖವನ್ನು ಒಳಗೊಂಡಿದೆ. ಇಲ್ಲಿಯೇ ಇನ್ನೊಂದು ಬದಿಯಲ್ಲಿ ನಿಲ್ಲಿಸಲಾಗಿರುವ ಒಂದನೇ ಸೋಮೇಶ್ವರನ ಕ್ರಿ.ಶ.೧೧೬೦ರ ತೇದಿವುಳ್ಳ ಶಾಸನವು ಮಹಾಸಾಮಂತಾಧಿಪತಿ ಮನೆವರ್ಗಡೆ ದಂಡನಾಯಕ ನಾಗದೇವನಿಂದ ನಾಗೇಶ್ವರ ದೇವಾಲಯ ನಿರ್ಮಾಣ ಹಾಗೂ ದಾನ ನೀಡಿದ ಮಾಹಿತಿಯನ್ನು ತಿಳಿಸುತ್ತದೆ.

## ೧೭. ಗಣೇಶನ ದೇವಾಲಯ(ಕಡಲೆಕಾಳು ಗಣೇಶ)

ಸೂಡಿ ಗ್ರಾಮದಲ್ಲಿ, ರಸದ ಬಾವಿಯ ಎಡಭಾಗ ಕ್ರಿ.ಶ.೧೧-೧೨ನೇ ಶತಮಾನದ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ಪೂರ್ವಾಭಿಮುಖವಾಗಿ ಕಡಲೆಕಾಳು ಗಣೇಶನ ದೇವಾಲಯವನ್ನು[೫೦] ನಿರ್ಮಿಸಲಾಗಿದೆ.

ಈ ದೇವಾಲಯವು ತಲನಕ್ಷೆಯಲ್ಲಿ ಚೌಕಾಕಾರವಾಗಿದ್ದು ಎತ್ತರವಾದ ಕಟ್ಟೆಯ ಮೇಲೆ ನಿರ್ಮಾಣಗೊಂಡಿದೆ. ಸರಳ ಅಧಿಷ್ಠಾನವನ್ನು ಹೊಂದಿರುವ ದೇವಾಲಯವು ಕೇವಲ ಗರ್ಭಗೃಹವನ್ನು ಒಳಗೊಂಡಿದೆ. ಚೌಕಾಕಾರದ ಗರ್ಭಗೃಹದಲ್ಲಿ ಸ್ಥಳೀಯವಾಗಿ ಸಿಗುವ ಕಣಶಿಲೆಯಲ್ಲಿ ನಿರ್ಮಾಣವಾದ ಬೃಹತ್ ಗಾತ್ರದ ಗಣೇಶನ ವಿಗ್ರಹವನ್ನು ಇಡಲಾಗಿದೆ. ಕುಳಿತ ಭಂಗಿಯಲ್ಲಿರುವ ಈ ವಿಗ್ರಹವು ಯಜ್ಞೋಪವಿತವನ್ನು ಧರಿಸಿದೆ. ಚತುರ್ಭುಜಧಾರಿಯಾದ ಈ ವಿಗ್ರಹವು ಒಂದು ಕೈಯಲ್ಲಿ ದಂತವನ್ನು, ಇನ್ನೊಂದು ಕೈಯಲ್ಲಿರುವ ಸೊಂಡಿನಿಂದ ಮಾದಕಗಳನ್ನು ಹಿಡಿದ ಬಂಗಿಯಲ್ಲಿದೆ. ಮೇಲ್ಭಾಚಿದ ಎರಡು ಕೈಗಳಲ್ಲಿ ಕಮಲ ಪುಷ್ಪಗಳಿವೆ. ಏಕದಂತನಾದ ಗಣಪನ ವಿಗ್ರಹವು ದೊಡ್ಡ ಗಾತ್ರದ ಕರ್ಣಪಟಲಗಳ ಕೆತ್ತನೆಯನ್ನು ಹೊಂದಿದೆ. ಕೊರಳಲ್ಲಿ ಹಾರ, ಉದರವನ್ನು ಸುತ್ತಿರುವ ಸರ್ಪ ಕೆತ್ತನೆಯನ್ನು ಒಳಗೊಂಡಿದ್ದು ಶಿರಭಾಗವು ಪೇಟ ಧರಿಸಿದಂತೆ ಕಾಣುತ್ತದೆ. ವಿಗ್ರಹದ ಹಿಂದು-ಮುಂದು ಸರಳ ಅಲಂಕೃತ ಕಂಬಗಳನ್ನು ಅಳವಡಿಸಲಾಗಿದೆ.

ಈ ದೇವಾಲಯದ ಎಡಭಾಗದಲ್ಲಿಯೇ ರಸದ ಬಾವಿ ಎಂದು ಕರೆಯಲ್ಪಡುವ ಬ್ರಹತ್ ಗಾತ್ರದ ಪುಷ್ಕರಣಿ ಇದೆ. ಇದನ್ನು ಕೆಂಪು ಮರಳು ಶಿಲೆಯಿಂದ ನಿರ್ಮಿಸಲಾಗಿದೆ. ಬಾವಿಯ ಎಡ-ಬಲ ಭಿತ್ತಿಗಳು ಹಾಗೂ ಮೆಟ್ಟಿಗಲುಗಳನ್ನು ಬಳಸಿ ಮುಂದೆ ಹೋದಂತೆ ಎದುರಿಗೆ ಕಾಣುವ ತೆರೆದ ಮೂರು ಒಳ ಭಿತ್ತಿಗಳು ಸುಂದರ ಅಲಂಕೃತ ಕೆತ್ತನೆಗಳಿಂದ ಕೂಡಿವೆ. ಗೋಡೆಗಂಬಗಳ ಮಧ್ಯದಲ್ಲಿ ಸುಂದರ ಶಿಖರಗಳನ್ನುಳ್ಳ ಕೊಷ್ಠಗಳನ್ನು ಕೆತ್ತಲಾಗಿದೆ. ಒಟ್ಟಾರೆಯಾಗಿ ಈ ಬಾವಿಯು ನೋಡಲು ಆಕರ್ಷಕವೂ ಮನಮೋಹಕವೂ ಆಗಿದೆ.

ಗಣೇಶ ದೇವಾಲಯದ ಮುಂಭಾಗದಲ್ಲಿ ಎರಡು ಶಿವನ ಶಿಲ್ಪಗಳನ್ನು ನಿಲ್ಲಿಸಲಾಗಿದೆ. ಇವುಗಳು ಚತುರ್ಭುಜಧಾರಿಯಾಗಿದ್ದು ತ್ರಿಭಂಗಿಯಲ್ಲಿವೆ. ಜಟಾಮುಕುಟ, ಹಾರ, ಕಡಗ, ಉತ್ತರೀಯ ಹಾಗೂ ಕೈಗಳಲ್ಲಿ ಅಕ್ಷಮಾಲೆ, ತ್ರಿಶೂಲ, ಢಮರು ಹಿಡಿದಿರುವಂತೆ ಕೆತ್ತಲಾಗಿದೆ. ಇದೇ ಸಮುಚ್ಛಯದಲ್ಲಿ ಸವೆದು ಹೋದ ಶಾಸನ ಶಿಲ್ಪವೊಂದನ್ನು ಸಹ ನಿಲ್ಲಿಸಲಾಗಿದೆ. ಅಲ್ಲದೆ ಗಣೇಶ ದೇವಾಲಯದ ಹಿಂಭಾಗದಲ್ಲಿ ಕಪ್ಪು ಶಿಲೆಯಲ್ಲಿ ನಿರ್ಮಿತವಾದ ಬೃಹದಾಕಾರದ ನಂದಿ ವಿಗ್ರಹವಿದೆ. ಇದಕ್ಕೆ ಮಂಟಪವನ್ನು ಕೂಡ ನಿರ್ಮಿಸಲಾಗಿದೆ. ಈ ನಂದಿ ಮಂಟಪದ ಬಲಕ್ಕೆ ಎತ್ತರದ ಲಿಂಗವನ್ನು ನಿಲ್ಲಿಸಲಾಗಿದೆ.

## ೧೮. ರಾಮಲಿಂಗೇಶ್ವರ ದೇವಾಲಯ

ಹಿರೇಹಾಳ ಗ್ರಾಮದ ಮಧ್ಯಭಾಗದಲ್ಲಿರುವ ರಾಮಲಿಂಗ ದೇವಲಾಯವನ್ನು[೬೧] ೧೧-೧೨ನೇ ಶತಮಾನದ ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ.

ಚೌಕಾಕಾರದ ತಲವಿನ್ಯಾಸವನ್ನು ಹೊಂದಿದ ದೇವಾಲಯವು ತಿರ್ಯಙ್ಮುಖ ಕ್ರಮದಲ್ಲಿ ಗರ್ಭಗೃಹ, ಅಂತರಾಳ, ಹಾಗೂ ನವರಂಗದ ಭಾಗಗಳನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ಚೌಕಾಕಾರದ ಎತ್ತರದ ಪೀಠದ ಮೇಲೆ ವೃತ್ತಾಕಾರದ ರುದ್ರಭಾಗವುಳ್ಳ ಲಿಂಗವಿದ್ದು ಅದಕ್ಕೆ ಇತ್ತೀಚಿನ ಲೋಹದ ಏಳೂ ಹೆಡೆ ಸರ್ಪದ ರಚನೆಯನ್ನು ಅಳವಡಿಸಲಾಗಿದೆ. ಬಾಗಿಲ ವಾಡವು ತ್ರಿಪಟ್ಟಿಕೆಗಳಿಂದ ಕೂಡಿದ್ದು ತೆರೆದ ಅಂತರಾಳವನ್ನು ದೇವಾಲಯವು ಹೊಂದಿದೆ. ಅಂತರಾಳ ಭಾಗದಲ್ಲಿ ಪ್ರಾಚೀನ ನಂದಿಶಿಲ್ಪ ಹಾಗೂ ಪ್ರಭಾವಳಿಯನ್ನು ಹೊಂದಿದ ನಾರಾಯಣನ ಶಿಲ್ಪವನ್ನಿಡಲಾಗಿದೆ. ಈ ನಾರಾಯಣನ ಶಿಲ್ಪವು ಚತುರ್ಭುಜ ಧಾರಿಯಾಗಿದ್ದು ಕೈಗಳಲ್ಲಿ ಶಂಖ, ಪದ್ಮ, ಒಂದು ಕೈ ವರದ ಹಸ್ತದ ತೋರಿಕೆ ಹಾಗೂ ಇನ್ನೊಂದು ಹಸ್ತವು ಸೊಂಟಭಾಗದಲ್ಲಿ ಇರಿಸಿರುವುದು ಹಾಗೂ ವಸ್ತ್ರಾಭರಣಾಲಂಕಾರದಿಂದ ಕೂಡಿದೆ. ಈ ತೆರೆದ ಅಂತರಾಳದಲ್ಲಿ ಎರಡು ವೃತ್ತಾಕಾರದ ಕಂಬಗಳನ್ನು ಜೋಡಿಸಲಾಗಿದೆ. ದೇವಾಲಯದ ನವರಂಗವು ವಿಶಾಲವಾಗಿದ್ದು ಮಧ್ಯಭಾಗದಲ್ಲಿ ನಾಲ್ಕು ಕಂಬಗಳನ್ನೊಳಗೊಂಡ ಎತ್ತರದ ಕಟ್ಟೆಯನ್ನು ನಿರ್ಮಿಸಲಾಗಿದೆ. ನವರಂಗದಲ್ಲಿನ ಈ ಕಂಬಗಳು ಚೌಕಾಕಾರದ ಪೀಠದ ಮೇಲೆ ಪಾದ, ದಂಡ, ಭಾಗಗಳನ್ನು ಒಳಗೊಂಡಿದ್ದು, ಫಲಕ ಹಾಗೂ ಬೋದಿಗೆ ಗಳನ್ನು ಹೊಂದಿವೆ. ಬಾಗಿಲವಾಡವು ಸರಳವಾಗಿದ್ದು, ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪದ ಕೆತ್ತನೆಯಿದೆ. ದೇವಾಲಯವು ಉಪಾನ, ಕಂಪ, ಕಪೋತ, ಕುಮುದಗಳ ಭಾಗಗಳನ್ನು ಹೊಂದಿದೆ. ಹೊರಭಿತ್ತಿಯಲ್ಲಿ ಗೋಡೆಗಂಬಗಳು ಹಾಗೂ ವೇಸರ ಶೈಲಿಯ ಶಿಖರಗಳುಳ್ಳ ಸಣ್ಣ ಮಂಟಪಗಳ ಕೆತ್ತನೆಯಿದೆ, ಶಿಖರ ಭಾಗವು ಭಾಗಶಃ ನಾಶಗೊಂಡಿದ್ದು,

ಈ ಮೊದಲು ಸುಂದರ ಶಿಖರವಿದ್ದುದರ ಕುರುಹುಗಳನ್ನು ಗಮನಿಸಬಹುದು. ದೇವಾಲಯದ ಮುಂಭಾಗದಲ್ಲಿ ತ್ರುಟಿತ ಶಾಸನ ಶಿಲ್ಪವನ್ನು ನಿಲ್ಲಿಸಲಾಗಿದೆ.

ಈ ಮೇಲಿನ ಶಾಸನವು[೬೨] ಪ್ರಕಟಗೊಂಡಿದೆ. ಇದು ಕಲ್ಯಾಣ ಚಾಲುಕ್ಯ ಮೂರನೇ ಸೋಮೇಶ್ವರನ ಕಾಲಕ್ಕೆ ಸೇರಿದ ಕ್ರಿ.ಶ.೧೧೩೦ ತೇದಿವುಳ್ಳದ್ದಾಗಿದೆ. ಇದರಲ್ಲಿ ಕಿಸುಬಾವಿಯ ಅಗ್ರಹಾರದ ೪೨ ಮಹಾಜನರು ಹೊನ್ನಿಗನೂರಿನ ೮೪ ಮಹಾಜನರು ಪಿರಿಯ ಮಠದ ಸೋಮೇಶ್ವರ ಪಂಡಿತರಿಗೆ ಹತ್ತು ಮತ್ತರು ಭೂಮಿ ಹಾಗು ಮಲ್ಲಿಯಣ್ಣನು ಬಿಟ್ಟ ಎರಡು ಮತ್ತರು ಭೂಮಿಯನ್ನು ದಾನ ನೀಡಿದ ಮಾಹಿತಿಯಿದೆ. ಇದೇ ಗ್ರಾಮದಲ್ಲಿ ವೀರಭದ್ರೇಶ್ವರ ದೇವಾಲಯದ ಮುಂಭಾಗದಲ್ಲಿರುವ ಇನ್ನೊಂದು ಶಾಸನವು ಇಲ್ಲಿನ ಶಿವಾಲಯಕ್ಕೆ ಭೂದಾನ ಮಾಡಿದ ಉಲ್ಲೇಖವನ್ನು ಹೊಂದಿದೆ. ಬಹುಶಃ ರಾಮಲಿಂಗೇಶ್ವರ ದೇವಾಲಯವೇ ಶಾಸನ ಉಲ್ಲೇಖಿತ ಶಿವಾಲಯವಾಗಿರಬಹುದು.

## ೧೯. ಕಲ್ಮೇಶ್ವರ ದೇವಾಲಯ

ಹುನಗುಂಡಿ ಗ್ರಾಮದಲ್ಲಿರುವ ಕಲ್ಮೇಶ್ವರ ದೇವಾಲಯವನ್ನು[೬೩] ೧೧-೧೨ನೇ ಶತಮಾನದಲ್ಲಿ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ. ಪ್ರಾಚೀನ ದೇವಾಲಯವನ್ನು ಸಂಪೂರ್ಣವಾಗಿ ಕೆಡವಿ ಹೊಸ ಕಟ್ಟವನ್ನು ನಿರ್ಮಿಸಲಾಗಿದೆ. ಪ್ರಸ್ತುತ ದೇವಾಲಯವು ಗರ್ಭಗೃಹ ಹಾಗೂ ಮಂಟಪ ಭಾಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಚೌಕಾಕಾರದ ಪೀಠವುಳ್ಳ ಲಿಂಗವಿದ್ದು, ಅದರ ಎದುರಿಗೆ ಮಂಟಪ ಭಾಗದಲ್ಲಿ ನಂದಿ ಶಿಲ್ಪವನ್ನು ಇಡಲಾಗಿದೆ.

## ೨೦. ನಾರಾಯಣ ದೇವಾಲಯ

ನಿಡಗುಂದಿ ಗ್ರಾಮದಲ್ಲಿರುವ ನಾರಾಯಣ ದೇವಾಲಯವನ್ನು[೬೪] ೧೧-೧೨ನೇ ಶತಮಾನದಲ್ಲಿ, ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ. ಅಲ್ಲದೆ ಇದೊಂದು 'ತ್ರೈಪುರುಷ' ದೇವಾಲಯವಾಗಿದ್ದು, ಚೌಕಾಕಾರದ ತಲವಿನ್ಯಾಸವನ್ನು ಹೊಂದಿದೆ.

ದೇವಾಲಯವು ತಿರ್ಯಙ್ಮುಖವಾಗಿ ಗರ್ಭಗೃಹ, ಅಂತರಾಳ ಹಾಗೂ ನವರಂಗ ಭಾಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಪ್ರಸ್ತುತ ಚೌಕಾಕಾರದ ಉದ್ದವಾದ ಒಂದೇ ಪೀಠದಲ್ಲಿ ಗಣೇಶ, ಲಕ್ಷ್ಮೀನಾರಾಯಣ ಹಾಗೂ ಶಿವಲಿಂಗಗಳನ್ನು ಕಾಣಬಹುದು. ಗಣೇಶ ವಿಗ್ರಹದ ಪೀಠ ಭಾಗದಲ್ಲಿ ಹಂಸವಾಹನ ಇರುವುದರಿಂದ ಇಲ್ಲಿ ಬ್ರಹ್ಮನ ಮೂರ್ತಿ ಇದ್ದಿತೆಂದು ಗಮನಿಸಬಹುದು. ಆದರೆ ಇಲ್ಲಿ ಬ್ರಹ್ಮನ ಮೂರ್ತಿ ಇಲ್ಲವಾದ್ದರಿಂದ ಗಣೇಶನ

ವಿಗ್ರಹವನ್ನು ಇಟ್ಟಿದ್ದಾರೆ. ಮಧ್ಯದಲ್ಲಿ ಅಕ್ಕಪಕ್ಕದಲ್ಲಿ ನಿಂತಿರುವ ಲಕ್ಷ್ಮೀನಾರಾಯಣರ ಮೂರ್ತಿ ಶಿಲ್ಪ ಇದೆ. ನಾರಾಯಣನ ಮೂರ್ತಿಯು ಚರ್ತುಭುಜವನ್ನು ಹೊಂದಿದ್ದು ಅಭಯಹಸ್ತ, ಶಂಖಚಕ್ರ, ಪುಷ್ಪವನ್ನು ಹಿಡಿದಂತೆ ಕೆತ್ತಿದ್ದು ಅಡಿಯಲ್ಲಿ ಗದೆ ರಚನೆಯನ್ನು ಹೊಂದಿದೆ. ಲಕ್ಷ್ಮೀ ನಾರಾಯಣ ಮೂರ್ತಿಯ ಬಲಭಾಗದಲ್ಲಿ ಚೌಕಾಕಾರದ ಪೀಠದಲ್ಲಿ ಶಿವಲಿಂಗವಿದೆ. ಪೀಠದಲ್ಲಿ ಶಿವನ ವಾಹನವಾದ ನಂದಿಯ ಉಬ್ಬುಶಿಲ್ಪವಿದೆ. ಗರ್ಭಗೃಹವು ಭುವನೇಶ್ವರಿಯನ್ನು ಹೊಂದಿದ್ದು, ಬಾಗಿಲವಾಡವು ಪಂಚಪಟ್ಟಿಕೆಯಿಂದ ಕೂಡಿದೆ. ಅಲ್ಲದೇ ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪ ಕೆತ್ತನೆಯಿದೆ. ದೇವಾಲಯಕ್ಕೆ ತೆರೆದ ಅಂತರಾಳವಿದ್ದು ಎರಡು ಸಾದಾ ರಚನೆಯ ಕಂಬಗಳನ್ನು ಕಾಣಬಹುದು. ನವರಂಗವು ವಿಶಾಲವಾಗಿದ್ದು ಎರಡು ರೀತಿಯ ಕಂಬಗಳ ರಚನೆ ಇಲ್ಲಿ ಕಾಣಬಹುದಾಗಿದೆ. ಇಲ್ಲಿನ ಕೆಲವು ಕಂಬಗಳು ಕೆಳಭಾಗದಲ್ಲಿ ಚೌಕಾಕಾರ ಹಾಗು ಮಧ್ಯಭಾಗದಲ್ಲಿಯೂ ಚೌಕಾಕಾರವಾಗಿದ್ದು ಮೇಲ್ಭಾಗದಲ್ಲಿ ವೃತ್ತಾಕಾರದ ಫಲಕವನ್ನು ಹಾಗೂ ಬೋದಿಗೆಗಳನ್ನು ಹೊಂದಿವೆ. ಇನ್ನೂ ಕೆಲವು ಕಂಬಗಳೂ ಕೆಳಭಾಗದಲ್ಲಿ ಚೌಕಾಕಾರ, ಮಧ್ಯಭಾಗದಲ್ಲಿ ಗಂಟೆಯಾಕಾರದ ರಚನೆಯಿದ್ದು ಮೇಲ್ಭಾಗದಲ್ಲಿ ಕಮಲದ ಹೂವಿನ ರಚನೆಯಾಕಾರ ಹಾಗೂ ತಟ್ಟೆಯಾಕಾರದ ಫಲಕಗಳು ಮತ್ತು ಬೋದಿಗೆಗಳನ್ನು ಹೊಂದಿವೆ. ನವರಂಗದ ಬಾಗಿವಾಡವೂ ಪಂಚಪಟ್ಟಿಕೆಯಿಂದ ಕೂಡಿದ್ದು ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಅಲ್ಲದೆ ಅತಿ ಮೇಲ್ಭಾಗದಲ್ಲಿ ಸಪ್ತಮಾತೃಕೆಯ ಶಿಲಾ ಫಲಕವನ್ನು ಜೋಡಿಸಿದ್ದಾರೆ. ದೇವಾಲಯದ ಅಧಿಷ್ಠಾನ ಭಾಗವು ಸರಳವಾಗಿದ್ದು ಉಪಾನ ಹಾಗೂ ಕಪೋತ ಭಾಗಗಳನ್ನು ಒಳಗೊಂಡಿದೆ. ಭಿತ್ತಿಯು ಸರಳವಾಗಿದ್ದು ಪ್ರಸ್ತರ ಭಾಗವು ಕೆಲವು ಅಲಂಕರಣೆಯಿಂದ ಕೂಡಿದೆ. ಆದರೆ ಶಿಖರ ಭಾಗವು ಸಂಪುರ್ಣವಾಗಿ ಬಿದ್ದಿದೆ. ಅಲ್ಲದೆ ದೇವಾಲಯದ ಆವರಣದಲ್ಲಿ ಗಣೇಶನ ವಿಗ್ರಹ, ಹಾಗೂ ಎರಡು ಶಾಸನಶಿಲ್ಪಗಳನ್ನು ನಿಲ್ಲಿಸಲಾಗಿದೆ.

## ೨೧. ದಾಸಮೇಶ್ವರ ದೇವಾಲಯ

ನಿಡಗುಂದಿ ಗ್ರಾಮದಲ್ಲಿರುವ ದಾಸಮೇಶ್ವರ ದೇವಾಲಯವನ್ನು[೩೭] ೧೧-೧೨ನೇ ಶತಮಾನದಲ್ಲಿ, ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ನಿರ್ಮಿಸಲಾಗಿದೆ. ಪೂರ್ವಾಭಿಮುಖವಾದ ಈ ದೇವಾಲಯವು ತ್ರಿಕೂಟ ರಚನೆಯಾಗಿದೆ.

ಚೌಕಾಕಾರದ ತಲವಿನ್ಯಾಸವನ್ನು ಹೊಂದಿರುವ ಈ ದೇವಾಲಯವು ತಿರ್ಯಙ್ಮುಖವಾಗಿ ಗರ್ಭಗೃಹ, ಅಂತರಾಳ ಹಾಗೂ ನವರಂಗ ಭಾಗಗಳನ್ನು ಹೊಂದಿದ್ದು ನವರಂಗದ ಇಕ್ಕೆಲಗಳಲ್ಲಿ ಇನ್ನೆರಡು ಗರ್ಭಗೃಹಗಳು ಇವೆ. ಪ್ರಧಾನ ಗರ್ಭಗೃಹದಲ್ಲಿ ಚೌಕಾಕಾರದ ಪೀಠದ

ಮೇಲೆ ವೃತ್ತಾಕಾರದ ಲಿಂಗವಿದ್ದು ಸುಂದರ ಭುವನೇಶ್ವರಿಯನ್ನು ಹೊಂದಿದೆ. ಅಂತರಾಳ ಭಾಗವು ನಂದಿ ಶಿಲ್ಪವನ್ನೊಳಗೊಂಡಿದ್ದು, ಭುವನೇಶ್ವರಿಯ ಕೆತ್ತನೆಯಿದೆ. ಬಾಗಿಲವಾಡವು ಪಂಚ ಪಟ್ಟಿಕೆಗಳಿಂದ ಕೂಡಿದ್ದು, ಸ್ತಂಭಾಕಾರದ ರಚನೆಯನ್ನೂ ಹೊಂದಿದೆ. ವಿಶಾಲವಾದ ನವರಂಗದಲ್ಲಿ ಇನ್ನೆರಡು ಗರ್ಭಗೃಹಗಳಿದ್ದು ಅವುಗಳು ಬ್ರಹ್ಮ ಮತ್ತು ವಿಷ್ಣುವಿಗೆ ರಚಿಸಿದವುಗಳಾಗಿವೆ. ಬಲಕ್ಕಿರುವ ವಿಷ್ಣುವಿನ ಗರ್ಭಗೃಹವು ಗರುಡನ ಉಬ್ಬುಶಿಲ್ಪವಿರುವ ನಕ್ಷತ್ರಾಕಾರದ ಪೀಠವನ್ನು ಹೊಂದಿದೆ. ಆದರೆ ಮುಖ್ಯ ಮೂರ್ತಿಯನ್ನು ಹೊಂದಿಲ್ಲ. ಸುಂದರ ಭುವನೇಶ್ವರಿಯ ಕೆತ್ತನೆಯನ್ನು ಇಲ್ಲಿ ಕಾಣಬಹುದು. ಹಾಗೆಯೇ ಎಡಕ್ಕಿರುವ ಗರ್ಭಗೃಹದಲ್ಲಿ ಹಂಸದ ಉಬ್ಬುಶಿಲ್ಪದ ಕೆತ್ತನೆಯನ್ನುಳ್ಳ ಶಿಲ್ಪರಹಿತ ಪೀಠವನ್ನು ಇಡಲಾಗಿದೆ. ಇದು ಸಹ ಭುವನೇಶ್ವರಿಯ ಕೆತ್ತನೆಯಿಂದ ಕೂಡಿದ್ದು, ಪಂಚಪಟ್ಟಿಕೆಯನ್ನು ಹೊಂದಿದ ಬಾಗಿಲವಾಡವಿದೆ. ಈ ನವರಂಗದಲ್ಲಿ ಎರಡು ಶಿಖರವುಳ್ಳ ಕೋಷ್ಠಗಳು ಇದ್ದು ಒಂದರಲ್ಲಿ ಗಣೇಶನ ವಿಗ್ರಹವಿದ್ದರೆ ಇನ್ನೊಂದು ಬರಿದಾಗಿದೆ. ಇಲ್ಲಿನ ಕಂಬಗಳು ಕೆಳಭಾಗದಲ್ಲಿ ಚೌಕಾಕಾರವಾಗಿದ್ದು, ಮಧ್ಯದಲ್ಲಿ ಗಂಟೆಯಾರದ ರಚನೆಯಿದ್ದು ಮೇಲ್ಭಾಗದಲ್ಲಿ ತಟ್ಟೆಯಾಕಾರದ ಫಲಕಗಳನ್ನು ಹಾಗೂ ಬೋದಿಗೆಗಳನ್ನು ಒಳಗೊಂಡಿವೆ. ಅಲ್ಲದೆ ಈ ಭಾಗದಲ್ಲಿ ಎತ್ತರವಾದ ಒಂದು ಶಾಸನಶಿಲ್ಪವನ್ನು ನಿಲ್ಲಿಸಲಾಗಿದೆ. ದೇವಾಲಯದ ಅಧಿಷ್ಠಾನವು ಸರಳವಾಗಿದ್ದು ಶಿಖರ ಭಾಗವು ಬಿದ್ದು ಹೋಗಿದೆ.

## ೨೨. ಶಂಭುಲಿಂಗ ದೇವಾಲಯ

ಇಟಗಿ ಗ್ರಾಮದಲ್ಲಿ ಕೆರೆಯ ದಂಡೆಯ ಮೇಲೆ ೧೨ನೇ ಶತಮಾನದಲ್ಲಿ ಶಂಭುಲಿಂಗ ದೇವಾಲಯವನ್ನು[೨೬] ನಿರ್ಮಿಸಲಾಗಿದೆ. ಇದು ಪೂರ್ವಾಭಿಮುಖವಾಗಿದ್ದು ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದೆ.

ಚೌಕಾಕಾರದ ತಲವಿನ್ಯಾಸವನ್ನು ಹೊಂದಿದ ಈ ದೇವಾಲಯವು ತಿರ್ಯಙ್ಮುಖ ಕ್ರಮದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಹಾಗೂ ಮುಖಮಂಟಪಗಳನ್ನು ಒಳಗೊಂಡಿದೆ. ಸುಂದರ ಭುವನೇಶ್ವರಿಯ ಅಲಂಕರಣೆಯನ್ನು ಹೊಂದಿದ ಗರ್ಭಗೃಹವು ವೃತ್ತಾಕಾರದ ಎರಡು ಲಿಂಗಗಳನ್ನು ಹೊಂದಿದೆ. ಇದರಲ್ಲಿ ಒಂದು ಲಿಂಗವು ಚೌಕಾಕಾರದ ಪೀಠವನ್ನು ಒಳಗೊಂಡಿದ್ದು ವೃತ್ತಾಕಾರದ ರುದ್ರಭಾಗವನ್ನು ಹೊಂದಿದೆ ಇನ್ನೊಂದು ಲಿಂಗವು ಪೀಠ ರಹಿತವಾಗಿದ್ದು ಅತಿ ಚಿಕ್ಕದಾದ ವೃತ್ತಾಕಾರದ ರುದ್ರಭಾಗವನ್ನು ಹೊಂದಿದೆ. ಗರ್ಭಗೃಹದ ಬಾಗಿಲವಾಡವು ಮೂರು ಪಟ್ಟಿಕೆಗಳನ್ನು ಒಳಗೊಂಡಿದ್ದು ಮೊದಲನೇ ಪಟ್ಟಿಕೆಯಲ್ಲಿ ವಜ್ರಾಕೃತಿ ಕೆತ್ತನೆಯನ್ನು ಚಿತ್ರಿಸಲಾಗಿದೆ. ಎರಡನೆ ಪಟ್ಟಿಕೆಯಲ್ಲಿ ಹಗ್ಗದ ರೀತಿಯ ಅಲಂಕರಣೆಯನ್ನು

ಕಾಣಬಹುದು. ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಗರ್ಭಗೃಹಕ್ಕೆ ಹೊಂದಿಕೊಂಡಂತೆ ಅಂತರಾಳ ಭಾಗವು ಇದ್ದು ಬರಿದಾಗಿದೆ. ಇದರ ಬಾಗಿಲವಾಡವು ಸಹ ಗರ್ಭಗೃಹದ ಬಾಗಿಲವಾಡದ ಮಾದರಿಯ ಅಲಂಕರಣೆಯನ್ನು ಹೊಂದಿದೆ. ಅಲ್ಲದೇ ಜಾಲಾಂಧ್ರಗಳನ್ನು ಅಳವಡಿಸಲಾಗಿದೆ.

ದೇವಾಲಯಕ್ಕೆ ವಿಶಾಲವಾದ ನವರಂಗವಿದೆ. ನಾಲ್ಕು ಕಂಬಗಳನ್ನೊಳಗೊಂಡಂತೆ ಎತ್ತರದ ಕಟ್ಟೆಯಿದೆ. ಇಲ್ಲಿರುವ ಕಂಬಗಳು ಅಧಿಷ್ಠಾನ, ದಂಡಭಾಗ ಹಾಗೂ ಫಲಕಗಳು ಮತ್ತು ಚೌಕಾಕಾರದ ಬೋದಿಗೆಳನ್ನು ಹೊಂದಿವೆ. ಅಲ್ಲದೆ ಇಲ್ಲಿರುವ ಅರ್ಧಕಂಬಗಳು ಇನ್ನೂ ಹೆಚ್ಚಿನ ಅಲಂಕರಣೆಯನ್ನು ಒಳಗೊಂಡಿವೆ. ಸುಂದರವಾದ ಭುವನೇಶ್ವರಿಯ ಕೆತ್ತನೆಯನ್ನೊಳಗೊಂಡ ನವರಂಗವು ನಾಲ್ಕು ಕೋಷ್ಠಗಳನ್ನು ಹೊಂದಿದೆ. ಎರಡು ಕೋಷ್ಠಗಳು ಬರಿದಾಗಿದ್ದು ಇನ್ನೆರಡು ಕೋಷ್ಠಗಳು ಬಿಡಿಶಿಲ್ಪಗಳನ್ನು ಹೊಂದಿವೆ. ಒಂದು ಕೋಷ್ಠದಲ್ಲಿ ಕುಳಿತ ಭಂಗಿಯಲ್ಲಿರುವ ಚಾಮುಂಡಿಯ ಶಿಲ್ಪವಿದೆ. ಕಪ್ಪುಶಿಲೆಯಲ್ಲಿ ನಿರ್ಮಿತ ಚತುರ್ಭುಜದ ಚಾಮುಂಡಿಯ ಶಿಲ್ಪವನ್ನು ಶವದ ಚಿತ್ರವಿರುವ ಪೀಠದ ಮೇಲಿರಿಸಲಾಗಿದೆ. ಜಟಾಮುಕುಟ, ಕುಂಡಲ, ಕಂಠಹಾರ, ಉಪವೀತ, ಕೇಯೂರ, ಕಂಕಣ, ವಸ್ತ್ರವಿನ್ಯಾಸ ಮುಂತಾದ ಭೂಷಣಾಭರಣಗಳಿದ್ದು, ಕೈಗಳಲ್ಲಿ ಖಡ್ಗ, ಢಮರು, ಶಂಖ ಮತ್ತು ಪಾನಪಾತ್ರೆ ಧಾರಿಯಾಗಿರುವುದನ್ನು ಕಾಣಬಹುದು. ಇನ್ನೊಂದು ಕೋಷ್ಠದಲ್ಲಿ ಸ್ತ್ರೀ-ಪುರುಷರ ಜೋಡಿ ಶಿಲ್ಪಗಳಿವೆ. ಕಪ್ಪು ಶಿಲೆಯಲ್ಲಿ ನಿರ್ಮಿತವಾದ ಈ ಶಿಲ್ಪಗಳಲ್ಲಿ ಪುರುಷ ಶಿಲ್ಪವು ಕುಳಿತ ಭಂಗಿಯಲ್ಲಿದ್ದು ಜಟಾಮುಕುಟ, ಕುಂಡಲ, ಕಂಠಹಾರ, ಯಜ್ಞೋಪವೀತ, ಕೇಯೂರ, ಕಂಕಣ, ವಸ್ತ್ರವಿನ್ಯಾಸ ಮುಂತಾದ ಭೂಷಣಾಭರಣಗಳನ್ನು ಹೊಂದಿದೆ. ಬದಿಯಲ್ಲಿರುವ ಸಮಭಂಗಿಯಲ್ಲಿ ನಿಂತ ಸ್ತ್ರೀಶಿಲ್ಪವು ಜಟಾಮುಕುಟ, ಕುಂಡಲ, ಹಾರ, ಕಂಕಣ ವಸ್ತ್ರವಿನ್ಯಾಸ ಭೂಷಣಾಭರಣಗಳನ್ನು ಧರಿಸಿದೆ. ಕೈಗಳಲ್ಲಿ ಪದ್ಮದ ರಚನೆ ಇದೆ. ಈ ಎಲ್ಲ ಕೋಷ್ಠಗಳಿಗೆ ವೇಸರ ಮಾದರಿಯ ಶಿಖರಗಳನ್ನು ಕೆತ್ತಲಾಗಿದೆ. ನವರಂಗದಲ್ಲಿ ಒಂದು ನಂದಿಯ ಶಿಲ್ಪವನ್ನಿಡಲಾಗಿದೆ. ನವರಂಗದ ಬಾಗಿಲವಾಡವು ಪಂಚಪಟ್ಟಿಕೆಗಳನ್ನು ಒಳಗೊಂಡಿದೆ. ದೇವಾಲಯಕ್ಕೆ ವಿಶಾಲವಾದ ಮುಖಮಂಟಪವಿದೆ. ಇದು ತೆರೆದ ಮಂಟಪದ ರಚನೆಯಲ್ಲಿದ್ದು ಆರು ಮಾದರಿಯ ೩೬ ಕಂಬಗಳಿವೆ. ಇವುಗಳ ಸುತ್ತಲೂ ಕಕ್ಷಾಸನವಿದ್ದು, ಭಿತ್ತಿಗುಂಟ ಇಳಿಜಾರದ ಛಾವಣಿ ಇದೆ. ದೇವಾಲಯದ ಅಧಿಷ್ಠಾನವು ಉಪಾನ, ಕಪೋತ ಹಾಗೂ ಗಳ ಭಾಗಗಳನ್ನು ಒಳಗೊಂಡಿದೆ. ಸರಳವಾದ ಹೊರಭಿತ್ತಿಯನ್ನು ಹೊಂದಿದ್ದು, ಶಿಖರ ಭಾಗವು ನಾಶವಾಗಿದೆ. ದೇವಾಲಯವನ್ನು ಕೆಂಪು ಮರಳು ಶಿಲೆಯನ್ನು ಬಳಸಿ ನಿರ್ಮಿಸಲಾಗಿದೆ. ದೇವಾಲಯದ ಆವರಣದಲ್ಲಿ ನಿಷಧಿಕಲ್ಲೊಂದನ್ನು ಇರಿಸಲಾಗಿದೆ.

ದೇವಾಲಯಕ್ಕೆ ಸಂಬಂಧಪಟ್ಟಂತ ಕ್ರಿ.ಶ.೧೦೫೫ರ ತೇದಿವುಳ್ಳ ಶಾಸನವೊಂದು[೩೭] ಪ್ರಕಟವಾಗಿದೆ. ಇದು ಕಲ್ಯಾಣ ಚಾಲುಕ್ಯ ಒಂದನೆಯ ಸೋಮೇಶ್ವರನ ಕಾಲದ ಶಾಸನವಾಗಿದ್ದು ಕಿಸುಕಾಡು ನಾಡಿನಲ್ಲಿಯ ಇಟ್ಟಿಗೆಯ ಮಹಾ ಅಗ್ರಹಾರ, ಶ್ರೀಪತಿ ಚಮೂಪನ ಜನ್ಮಭೂಮಿ ಎಂದು ಉಲ್ಲೇಖಿಸಿದೆ.

## ೨೩. ಸೋಮೇಶ್ವರ ದೇವಾಲಯ

೧೨ನೇ ಶತಮಾನದ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ನಿರ್ಮಿತವಾದ ಕುರುಕಟ್ಟಿಯ ಸೋಮೇಶ್ವರ ದೇವಾಲಯವು[೩೮] ಗ್ರಾಮದ ಕೆರೆಯ ದಂಡೆಯ ಮೇಲೆ ಸ್ಥಿತವಾಗಿದ್ದು ಪೂರ್ವಾಭಿಮುಖವಾಗಿದೆ. ಗ್ರಾಮಸ್ಥರು ದೇವಾಲಯವನ್ನು ಮರು ನಿರ್ಮಿಸಿದ್ದಾರೆ. ದೇವಾಲಯವು ಕೇವಲ ಗರ್ಭಗೃಹವನ್ನು ಮಾತ್ರ ಒಳಗೊಂಡಿದ್ದು ಪ್ರಾಚೀನ ಪೀಠರಹಿತ ಲಿಂಗಗಳಿವೆ. ಗರ್ಭಗೃಹ ಹೊರಭಾಗದಲ್ಲಿ ಸಪ್ತಮಾತೃಕೆಯ, ನಾಗ ಹಾಗೂ ವೀರಭದ್ರನ ಶಿಲ್ಪಗಳಿವೆ ಮತ್ತು ಶಾಸನಶಿಲ್ಪವನ್ನು ಸಹ ಅಲ್ಲಿಯೇ ಇಡಲಾಗಿದೆ. ಇದು ೧೧೨೮ರ ತೇದಿವುಳ್ಳ ಶಾಸನವಾಗಿದ್ದು ಅತಿ ತ್ರುಟಿತಗೊಂಡಿರುವುದರಿಂದ ಭೂದಾನದ ಉಲ್ಲೇಖವನ್ನು ಬಿಟ್ಟರೆ ಬೇರಾವ ಮಾಹಿತಿಯನ್ನು ತಿಳಿಸುವುದಿಲ್ಲ. ಉಳಿದಂತೆ ದೇವಾಲಯವು ಸುಣ್ಣಬಣ್ಣಗಳಿಂದ ಅಲಂಕೃತಗೊಂಡಿದೆ.

## ೨೪. ಚನ್ನಬಸವೇಶ್ವರ ದೇವಾಲಯ

ಕುಂಟೋಜಿಯ ಚನ್ನಬಸವೇಶ್ವರ ಅಥವಾ ಶರಣ ಬಸವೇಶ್ವರ ದೇವಾಲಯವು[೩೯] ಗ್ರಾಮದ ವಾಯವ್ಯಕ್ಕಿದ್ದು ೧೨ನೇ ಶತಮಾನದಲ್ಲಿ, ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ಪಶ್ಚಿಮಾಭಿಮುಖವಾಗಿ ನಿರ್ಮಾಣವಾಗಿದೆ. ಪ್ರಾಚೀನ ಕಾಲದಲ್ಲಿ ಈಶ್ವರ ದೇವಾಲಯ ಎಂದು ಕರೆಯಲಾಗುತ್ತಿದ್ದು ದೇವಾಲಯವು ಇಂದು ಸಂಪೂರ್ಣವಾಗಿ ನವೀಕರಣಗೊಂಡಿದೆ. ಪ್ರಸ್ತುತ ಇದು ಗರ್ಭಗೃಹ ಹಾಗೂ ಮಂಟಪದ ಭಾಗಗಳನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ಶರಣ ಬಸವೇಶ್ವರರ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಅಲ್ಲದೆ ಭುವನೇಶ್ವರಿಯನ್ನು ಕಾಣಬಹುದಾಗಿದೆ. ಕಟ್ಟಡದ ಮೇಲ್ಭಾಗವು ಕಮಾನಿನಾಕೃತಿಯಲ್ಲಿ ನಿರ್ಮಿಸಲಾಗಿದೆ. ಹಳೆಯ ಕಟ್ಟಡದ ಯಾವುದೇ ಕುರುಹುಗಳು ಇಂದು ಅಲ್ಲಿ ಕಂಡುಬರುವುದಿಲ್ಲ.

ಕುಂಟೋಜಿ ಗ್ರಾಮದಲ್ಲಿ ಕಲ್ಯಾಣ ಚಾಲುಕ್ಯ ಎರಡನೇ ಸೋಮೇಶ್ವರನ ಕಾಲದ ಶಾಸನವು[೪೦] ಪ್ರಕಟವಾಗಿದೆ. ಈ ಶಾಸನವು ಕ್ರಿ.ಶ.೧೦೭೨ರ ತೇದಿಯುಳ್ಳದ್ದಾಗಿದ್ದು ನಕರೇಶ್ವರ

ದೇವಾಲಯದ ಬಗೆಗೆ ಉಲ್ಲೇಖ ನೀಡುತ್ತದೆ. ಹಾಗೂ ಸ್ಥಳೀಯ ನಕರರ ದೇವರಿಗೆ ದಾನ ನೀಡಿರುವ ಮಾಹಿತಿ ಇದೆ.

## ೨೫. ಮಲ್ಲಯ್ಯ ಅಜ್ಜಯ್ಯನ ದೇವಾಲಯ

ಗ್ರಾಮದ ಪಶ್ಚಿಮಕ್ಕಿರುವ ಸುಮಾರು ೧೨ನೇ ಶತಮಾನಕ್ಕೆ ಸೇರಿದ ಕೋಚಲಾಪುರದ ಮಲ್ಲಯ್ಯ ಅಜ್ಜಯ್ಯನ ದೇವಾಲಯವು[೪೧] ಪೂರ್ವಾಭಿಮುಖವಾಗಿದ್ದು ಕಲ್ಯಾಣ ಚಾಲುಕ್ಯ ಶೈಲಿಯದ್ದಾಗಿದೆ.

ಪ್ರಾಚೀನ ಕಾಲದ ಈ ದೇವಾಲಯವನ್ನು ದುರಸ್ತಿಗೊಳಿಸಿದ್ದಾರೆ. ಕೇವಲ ಗರ್ಭಗೃಹ ವನ್ನು ಮಾತ್ರ ಹೊಂದಿದ್ದು ಉಳಿದೆಲ್ಲ ಭಾಗಗಳು ಬಿದ್ದು ಹೋಗಿವೆ. ಉಳಿದಿರುವ ಗರ್ಭಗೃಹಕ್ಕೆ ಪೂರ್ವ ಹಾಗೂ ದಕ್ಷಿಣಾಭೀಮುಖವಾಗಿ ಪ್ರವೇಶದ್ವಾರಗಳನ್ನು ನಿರ್ಮಿಸಿದ್ದಾರೆ. ಪ್ರಾಚೀನ ಕಾಲದ ವೃತ್ತಾಕಾರದ ಲಿಂಗವನ್ನು ಗರ್ಭಗೃಹದಲ್ಲಿ ಇಡಲಾಗಿದ್ದು ವಿಜಯನಗರ ನಂತರ ಕಾಲದ ನಾಲ್ಕು ಕಂಬಗಳನ್ನು ಗರ್ಭಗೃಹದಲ್ಲಿ ಅಳವಡಿಸಿದ್ದಾರೆ. ಇವುಗಳು ನೋಡಲು ಸುಂದರವಾಗಿದ್ದು ಫಲಕ ಹಾಗೂ ಬೋದಿಗೆಗಳನ್ನು ಹೊಂದಿವೆ. ಗೋಡೆಯಲ್ಲಿ ಅರ್ಧಕಂಬಗಳ ರಚನೆಗಳಿವೆ. ಪೂರ್ವಾಭಿಮುಖವಾಗಿರುವ ದ್ವಾರ ಬಾಗಿಲದ ಲಲಾಟದಲ್ಲಿ ಗಣೇಶನ ಉಬ್ಬುಶಿಲ್ಪವಿದೆ. ಕೆಳಗೆ ದ್ವಾರಪಾಲಕ ಶಿಲ್ಪಗಳಿವೆ. ದೇವಾಲಯಕ್ಕೆ ಹೊಸದಾಗಿ ಶಿಖರವನ್ನು ನಿರ್ಮಿಸಿದ್ದಾರೆ.

## ೨೬. ಕಲ್ಮೇಶ್ವರ ದೇವಾಲಯ

ತೋಟಗಂಟಿಯ ಕಲ್ಮೇಶ್ವರ ದೇವಾಲಯವು[೪೨] ಗ್ರಾಮದ ಪಶ್ಚಿಮಕ್ಕಿದ್ದು ೧೨ನೇ ಶತಮಾನದಲ್ಲಿ ಚಾಲುಕ್ಯ ಶೈಲಿಯಲ್ಲಿ ನಿರ್ಮಾಣವಾಗಿದೆ. ಚೌಕಾಕಾರದ ತಲವಿನ್ಯಾಸವನ್ನು ಹೊಂದಿರುವ ದೇವಾಲಯವು ಪೂರ್ವಾಭಿಮುಖವಾಗಿದ್ದು ಗರ್ಭಗೃಹ ಹಾಗೂ ಅಂತರಾಳ ಭಾಗಗಳನ್ನು ಒಳಗೊಂಡಿದೆ. ಆದರೆ ದೇವಾಲಯವು ನವರಂಗವನ್ನು ಹೊಂದಿತ್ತೆಂಬುದಕ್ಕೆ ಸಾಮಾನ್ಯವಾಗಿ ನವರಂಗದ ನಾಲ್ಕು ಕಂಬಗಳನ್ನೊಳಗೊಂಡು ರಚನೆಯಾಗಿರುವ ಎತ್ತರದ ಕಟ್ಟೆಯನ್ನು ನೋಡಬಹುದು. ಆದರೆ ನವರಂಗದ ಭಾಗವೂ ಸಂಪೂರ್ಣ ಬಿದ್ದುಹೋಗಿದ್ದು, ಕೇವಲ ಕಟ್ಟೆಯನ್ನು ಕಾಣಬಹುದಾಗಿದೆ. ಗರ್ಭಗೃಹದಲ್ಲಿ ವೃತ್ತಾಕಾರದ ಲಿಂಗವಿದ್ದು ಭುವನೇಶ್ವರಿಯ ಅಲಂಕರಣೆಯನ್ನು ಒಳಗೊಂಡಿದೆ. ದೇವಾಲಯದ ಅಂತರಾಳವು ಬರಿದಾಗಿದ್ದು ಅದರ ಬಾಗಿಲವಾಡವು ಪಂಚಪಟ್ಟಿಕೆಗಳಿಂದ ರಚನೆಯಾಗಿರುವುದು ಅಲ್ಲದೇ ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪ ಕೆತ್ತನೆಹೊಂದಿದೆ. ನಾಶವಾದ ನವರಂಗದ ಕಟ್ಟೆಯಲ್ಲಿ ಭಗ್ನಗೊಂಡ ಅಲಂಕೃತ ನಂದಿಯ ಶಿಲ್ಪವನ್ನಿಡಲಾಗಿದೆ.

ದೇವಾಲಯದ ಅಧಿಷ್ಠಾನ ಹಾಗೂ ಹೊರಗೋಡೆಯ ಭಾಗಗಳು ಹೆಚ್ಚಿನ ಅಲಂಕರಣೆಯಿಂದ ಕೂಡಿದೆ. ಅಧಿಷ್ಠಾನ ಭಾಗವು ಉಪಾನ, ಜಗತಿ, ಗಳ, ಕಪೋತ ಹಾಗು ತ್ರಿಪಟ್ಟ ಕುಮುದ ರಚನೆಯನ್ನು ಸ್ಪಷ್ಟವಾಗಿ ಹೊಂದಿರುವುದು. ಅಧಿಷ್ಠಾನದಲ್ಲಿರುವ ಜಗತಿ ಭಾಗವು ಸ್ವಲ್ಪಮಟ್ಟಿಗೆ ಎತ್ತರವಾಗಿದೆ.

ಹೊರಗೋಡೆಯು ಅನೇಕ ರೀತಿಯ ಅಲಂಕರಣೆಯಿಂದ ಕೂಡಿದೆ. ಅರ್ಧ ಕಂಬಗಳನ್ನು, ಪಂಚಶಾಖೆಯನ್ನು ಹೊಂದಿರುವ ಕಂಬಗಳ ಅಲಂಕರಣೆ ಹಾಗೂ ಹೊರಗೋಡೆಯಲ್ಲಿ ಕೆತ್ತಿರುವ ಅರ್ಧಕಂಬಗಳ ಮೇಲೆ ಚಿಕ್ಕ ಶಿಖರಗಳನ್ನು ನಿರ್ಮಿಸಿದ್ದಾರೆ. ಅಲ್ಲದೇ ಕೀರ್ತಿಮುಖ, ಯಾಳಿ ಹಾಗೂ ಗಜ ಸವಾರಿ ಅಲಂಕಾರವನ್ನು ಗೋಡೆಯ ಭಾಗದಲ್ಲಿ ವಿಶೇಷವಾಗಿ ಕೆತ್ತಲಾಗಿದೆ.

ಗರ್ಭಗೃಹದ ಹೊರಗೋಡೆಯಲ್ಲಿ ಮೂರು ಕಡೆಗಳಲ್ಲಿ ಕೋಷ್ಠಗಳಿದ್ದು ಅವು ಬರಿದಾವೆ. ಅವುಗಳ ಮೇಲಿನ ಶಿಖರ ರಚನೆ ಆಕರ್ಷಕವಾಗಿದೆ. ಈ ಶಿಖರ ಕೆತ್ತನೆಯಲ್ಲಿ ಏಳು ತಲಗಳನ್ನು ನಿರ್ಮಿಸಿದ್ದು ಪ್ರತಿ ತಲದಲ್ಲಿ ಕೀರ್ತಿಮುಖ ಹಾಗೂ ಕಪೋತಗಳನ್ನು ರಚಿಸಿದ್ದಾರೆ. ಚಿಕ್ಕ ಶಿಖರದಲ್ಲಿ ಎರಡು ತಲಗಳ ನಂತರ ಅರ್ಧಕಂಬಗಳ ಮಂಟಪವನ್ನು ಕಂಡರಿಸಲಾಗಿದೆ.

ದೇವಾಲಯದ ಮೇಲ್ಛಾವಣಿ ಹಾಗೂ ಶಿಖರವು ಸಂಪೂರ್ಣವಾಗಿ ಬಿದ್ದುಹೋಗಿದ್ದು ಅಲ್ಪ ಮಟ್ಟಿಗೆ ದುರಸ್ಥಿಗೊಳಿಸಲಾಗಿದೆ. ಕೆಂಪು ಮರಳು ಶಿಲೆಯಿಂದ ಹಾಗೂ ಸುಂದರವಾದ ಕೆತ್ತನೆಗಳಿಂದ ಕೂಡಿರುವ ಈ ದೇವಾಲಯದ ಉಲ್ಲೇಖವು ಯಾವುದೇ ಶಾಸನಗಳಲ್ಲಿ ದೊರೆಯುವುದಿಲ್ಲ.

## ೨೭. ಮಲ್ಲಯ್ಯನ ದೇವಾಲಯ

೧೨ನೇ ಶತಮಾನದ ಕಲ್ಯಾಣ ಚಾಲುಕ್ಯ ಶೈಲಿಯ ಮತ್ತೊಂದು ದೇವಾಲಯ ತೋಟಗಂಟಿ ಗ್ರಾಮದಲ್ಲಿದೆ. ಇದನ್ನು ಮಲ್ಲಯ್ಯನ ದೇವಾಲಯವೆಂದು[೪೩] ಕರೆಯಲಾಗುತ್ತದೆ. ಉತ್ತರಾಭಿಮುಖವಾದ ಈ ದೇವಾಲಯವನ್ನು ನವೀಕರಿಸಲಾಗಿದೆ. ಪ್ರಸ್ತುತದಲ್ಲಿ ಆಯತಾಕಾರದ ತಲವಿನ್ಯಾಸ ಹೊಂದಿದ್ದು, ಈ ದೇವಾಲಯವು ವಿಸ್ತಾರವಾದ ತೆರೆದ ಗರ್ಭಗೃಹವನ್ನು ಒಳಗೊಂಡಿದೆ. ಉಮಾಮಹೇಶ್ವರ ಹಾಗೂ ಅಲ್ಪಮಟ್ಟಿಗೆ ಸವೆದಿರುವ ಮಹಿಷಾಸುರ ಮರ್ದಿನಿಯ ಶಿಲ್ಪ, ನಾಗಬಂಧದ ಶಿಲ್ಪಗಳು ಹಾಗೂ ಇನ್ನೂ ಕೆಲವು ಪ್ರಾಚೀನ ಶಿಲ್ಪಗಳನ್ನು ಇಲ್ಲಿ ಇಡಲಾಗಿದೆ. ಉಮಾಮಹೇಶ್ವರರ ಶಿಲ್ಪವು ಕೈಯಲ್ಲಿ ಢಮರು, ತ್ರಿಶೂಲ, ಖಡ್ಗ ಹಾಗೂ ಫಲಾಹಾರ ಪುಷ್ಪಗಳನ್ನು ಒಳಗೊಂಡಿದೆ.

ಇದೇ ಗ್ರಾಮದ ಹನುಮಂತನ ದೇವಾಲಯದಲ್ಲಿ ಪ್ರಾಚೀನವಾದ ಹಾಗೂ ಸುಂದರ ಕೆತ್ತನೆಯುಳ್ಳ ವಿಷ್ಣುವಿನ ಶಿಲ್ಪವಿದೆ. ಈ ಶಿಲ್ಪವು ಚತುರ್ಭುಜಧಾರಿಯಾಗಿದ್ದು, ವಸ್ತ್ರಾಭರಣಗಳಿಂದ ಅಲಂಕೃತಗೊಂಡಿದೆ. ಅಲ್ಲದೆ ಶಿಲ್ಪದ ಎಡ ಮತ್ತು ಬಲ ಬದಿಗಳಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ಚಾಮರಧಾರಿಣಿಯರ ಶಿಲ್ಪಗಳ ಕೆತ್ತನೆಯಿದೆ.

## ೨೮. ಕಲ್ಮೇಶ್ವರ ದೇವಾಲಯ

ಮೆಣಸಗಿಯ ಕಲ್ಮೇಶ್ವರ ದೇವಾಲಯವು[೪೪] ಗ್ರಾಮದ ಪೂರ್ವಕ್ಕಿದ್ದು ೧೨ನೇ ಶತಮಾನಕ್ಕೆ ಸೇರಿದುದಾಗಿದೆ. ಕಲ್ಯಾಣ ಚಾಲುಕ್ಯ ಮಾದರಿಯ ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ಕೆಂಪು ಮರಳು ಶಿಲೆಯಿಂದ ನಿರ್ಮಿತಗೊಂಡಿದೆ. ಭಾಗಶಃ ವಿನಾಶದ ಅಂಚಿನಲ್ಲಿರುವ ಈ ದೇವಾಲಯದ ಗರ್ಭಗೃಹ ಮಾತ್ರ ಉಳಿದಿದೆ. ಆದರೆ ಈ ಮೊದಲು ದೇವಾಲಯ ಗರ್ಭಗೃಹ, ಅಂತರಾಳ ಹಾಗೂ ನವರಂಗಗಳನ್ನು ಹೊಂದಿತ್ತು ಎಂಬುದಕ್ಕೆ ದೇವಾಲಯದ ಅವಶೇಷಗಳೇ ಸಾಕ್ಷಿಯಾಗಿವೆ. ಅಂತರಾಳ ಹಾಗೂ ನವರಂಗಗಳ ಮೇಲ್ಛಾವಣಿ ಸಂಪೂರ್ಣ ವಾಗಿ ಬಿದ್ದಿದ್ದು ಅವುಗಳಲ್ಲಿನ ಕಂಬಗಳು ಹಾಗೂ ಬಾಗಿಲವಾಡಗಳ ಚೌಕಟ್ಟುಗಳು ಹಾಗೂ ಇತರೆ ಪ್ರಾಚ್ಯಾವಶೇಷಗಳು ಈಗಲೂ ಕಂಡುಬರುತ್ತವೆ.

ಎತ್ತರದ ಕಟ್ಟೆಯ ಮೇಲೆ ನಿರ್ಮಾಣವಾದ ದೇವಾಲಯವು ನಕ್ಷತ್ರಾಕಾರದ ತಲವಿನ್ಯಾಸ ವನ್ನು ಹೊಂದಿದ್ದು, ಗರ್ಭಗೃಹದಲ್ಲಿ ಶಿವಲಿಂಗನ್ನೊಳಗೊಂಡಿದೆ. ಅಲ್ಲದೆ ಅಲಂಕೃತ ಭುವನೇಶ್ವರಿಯನ್ನೂ ಹೊಂದಿದೆ. ಅಧಿಷ್ಠಾನ ಭಾಗವು ಎತ್ತರವಾಗಿದ್ದು ಕಪೋತ, ಗಳ, ತ್ರಿಪಟ್ಟ ಕುಮುದ ಭಾಗಗಳನ್ನು ಹೊಂದಿದೆ. ಗರ್ಭಗೃಹದ ಹೊರಭಿತ್ತಿಯಲ್ಲಿ ಸುಂದರವಾದ ಗೋಡೆ ಕಂಬಗಳನ್ನು ರಚಿಸಲಾಗಿದೆ. ಹೊರಗೋಡೆಯಲ್ಲಿ ಮೂರು ಕೋಷ್ಠಗಳನ್ನು ನಿರ್ಮಿಸ ಲಾಗಿದೆ. ಇವು ದ್ರಾವಿಡ ಮಾದರಿಯ ಶಿಖರಗಳನ್ನು ಹೊಂದಿವೆ. ಹೊರಭಿತ್ತಿಯಲ್ಲಿನ ಕೋಷ್ಠಕಗಳಿಗೂ ಹಾಗೂ ಅರ್ಧಕಂಬಗಳ ನಡುವೆ ಇರುವ ಭಾಗದಲ್ಲಿ ನಾಗಮಂಡಲ ಅಲಂಕಾರದ ಕೀರ್ತಿಮುಖಗಳನ್ನು ಕೆತ್ತಲಾಗಿದೆ. ಅಲ್ಲದೆ ಹೊರಭಿತ್ತಿಯಲ್ಲಿ ಉಬ್ಬುಶಿಲ್ಪಗಳನ್ನು ಕೆತ್ತಿದ್ದು, ಅವು ಶಿವನ ಅವತಾರಗಳನ್ನು ಪರಿಚಯಿಸುವ ಶಿಲ್ಪಗಳು.

ಅಲ್ಲದೆ ಕೆಲವು ಶಿಲ್ಪಗಳನ್ನು ಹೊರಗೋಡೆಯಲ್ಲಿ ನಿರ್ಮಿಸಲಾಗಿರುವ ಕೋಷ್ಠಕಗಳಲ್ಲಿ ಇಡಲಾಗಿದೆ. ಮೇಲ್ಛಾವಣಿಯಲ್ಲಿ ಕೀರ್ತಿಮುಖ, ಆನೆ ಹಾಗೂ ಸಿಂಹಗಳ ಉಬ್ಬುಶಿಲ್ಪಗಳನ್ನು ಅಳವಡಿಸಲಾಗಿದೆ. ದೇವಾಲಯದ ಶಿಖರಭಾಗವು ಸಂಪೂರ್ಣವಾಗಿ ಬಿದ್ದು ಹೋಗಿದೆ. ಕಲಾ ವೈಶಿಷ್ಟ್ಯತೆಯಿಂದ ಕೂಡಿರುವ ಈ ದೇವಾಲಯದ ಬಗೆಗೆ ಲಿಖಿತವಾದ ಯಾವುದೇ ಮಾಹಿತಿಗಳು ಲಭ್ಯವಿಲ್ಲ.

## ೨೯. ಕಂಚೇಶ್ವರ ದೇವಾಲಯ

ನಿಡಗುಂದಿ ಗ್ರಾಮದಲ್ಲಿರುವ ಕಂಚೇಶ್ವರ ದೇವಾಲಯವನ್ನು[೪೫] ೧೨ನೇ ಶತಮಾನದಲ್ಲಿ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ಕೆಂಪು ಮರಳು ಶಿಲೆಯಿಂದ ನಿರ್ಮಿಸಲಾಗಿದೆ.

ಚೌಕಾಕಾರದ ತಲವಿನ್ಯಾಸವನ್ನು ಹೊಂದಿರುವ ದೇವಾಲಯವಾಗಿದ್ದು ತಿರ್‍ಯಙ್ಮುಖವಾಗಿ ಗರ್ಭಗೃಹ, ಅಂತರಾಳ, ಹಾಗೂ ನವರಂಗ ಭಾಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಚೌಕಾಕಾರದ ಪೀಠವುಳ್ಳ ಲಿಂಗವಿದೆ. ತೆರೆದ ಅಂತರಾಳವಿದ್ದು, ನಂದಿಶಿಲ್ಪವನ್ನು ಒಳಗೊಂಡಿದೆ. ನವರಂಗದಲ್ಲಿ ಸರಳ ರಚನೆಯ ಕಂಬಗಳಿದ್ದು ಬೋದಿಗೆಗಳನ್ನು ಹೊಂದಿದುದಾಗಿವೆ. ದೇವಾಲಯದ ಅಧಿಷ್ಠಾನವು ಉಪಾನ ತ್ರಿಪಟ್ಟ ಕುಮುದ ಹಾಗೂ ಕಪೋತ ಭಾಗಗಳನ್ನು ಹೊಂದಿದ್ದು ಭಿತ್ತಿಭಾಗವು ಗೋಡೆಗಂಬಗಳಿಂದ ಅಲಂಕೃತಗೊಂಡಿದೆ. ಶಿಖರ ಭಾಗವು ಎರಡು ತಲಗಳನ್ನು ಒಳಗೊಂಡಿದ್ದು, ದ್ರಾವಿಡ ಮಾದರಿಯದ್ದಾಗಿದೆ.

ಈ ದೇವಾಲಯಕ್ಕೆ ಸಂಬಂಧಿಸಿದ ಶಾಸನವೊಂದು[೪೬] ಪ್ರಕಟಗೊಂಡಿದೆ. ದೇವಾಲಯದ ಕಂಬಮೊಂದರಲ್ಲಿರುವ ಸಾಸನವು ಈಶಾನ್ಯ ಶಕ್ತಿ ದೇವರು ನಿಡಗುಂದಿಯ ಅಕ್ಕಬೇಶ್ವರ ದೇವಾಲಯದ ಎಣ್ಣೆಗಾಣವನ್ನು ಮಾಹೇಶ್ವರದ ಕಾಳಿಸೆಟ್ಟಿಗೆ ಒಪ್ಪಿಸಿದ ಉಲ್ಲೇಖವನ್ನು ಹೊಂದಿದೆ.

## ೩೦. ಬಸವಣ್ಣದೇವರ ದೇವಾಲಯ

ನಿಡಗುಂದಿ ಗ್ರಾಮದಲ್ಲಿರುವ ಬಸವಣ್ಣ ದೇವರ ದೇವಾಲಯವನ್ನು[೪೭] ೧೨ನೇ ಶತಮಾನದಲ್ಲಿ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ನಿರ್ಮಿಸಲಾಗಿದೆ.

ಚೌಕಾಕಾರದ ತಲವಿನ್ಯಾಸವನ್ನು ಹೊಂದಿರುವ ದೇವಾಲಯವು ತಿರ್‍ಯಙ್ಮುಖವಾಗಿ ಗರ್ಭಗೃಹ, ಅಂತರಾಳ ಹಾಗೂ ನವರಂಗದ ಭಾಗಗಳನ್ನು ಹೊಂದಿದ್ದು, ನವರಂಗಭಾಗವನ್ನು ದುರಸ್ತಿಗೊಳಿಸಲಾಗಿದೆ. ಗರ್ಭಗೃಹದಲ್ಲಿ ಚೌಕಾಕಾರದ ಪೀಠವುಳ್ಳ ಶಿವಲಿಂಗವಿದೆ. ಹಾಗೆಯೇ ಅಂತರಾಳದಲ್ಲಿಯೂ ಮತ್ತೊಂದು ಚೌಕಾಕಾರದ ಪೀಠವುಳ್ಳ ಲಿಂಗ ಹಾಗೂ ಲಿಂಗಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತಿರುವ ಸರಸ್ವತಿಯ ಅಲಂಕೃತ ಶಿಲ್ಪವಿದೆ. ದುರಸ್ತಿಗೊಂಡ ನವರಂಗ ಭಾಗದಲ್ಲಿ ಭೈರವನ ಶಿಲ್ಪ ಹಾಗೂ ಚೌಕಾಕಾರದ ರುದ್ರಭಾಗವನ್ನು ಹೊಂದಿರುವ ಲಿಂಗವನ್ನು ಕಾಣಬಹುದು. ಗರ್ಭಗೃಹಕ್ಕೆ ಎದುರಾಗಿ ನವರಂಗ ಭಾಗದಲ್ಲಿ ಹಿರಿದಾದ ಅಲಂಕೃತ ನಂದಿ ಶಿಲ್ಪವಿದೆ. ಇದಕ್ಕೆ ಗರ್ಭಗೃಹದಷ್ಟು ವಿಸ್ತಾರವಾದ ಕೋಣೆಯನ್ನು ರಚಿಸಲಾಗಿದೆ. ದೇವಾಲಯದ ಹೊರ ಆವರಣದಲ್ಲಿ ನಾಗಬಂಧವನ್ನು ಹೊಂದಿರುವ

ಪಾರ್ಶ್ವನಾಥನ ಶಿಲ್ಪ ಹಾಗೂ ಕಲ್ಯಾಣಚಾಲುಕ್ಯ ಮತ್ತು ಯಾದವರ ಕಾಲದ ಶಾಸನಗಳನ್ನು ನಿಲ್ಲಿಸಲಾಗಿದೆ.

ಈ ದೇವಾಲಯದ ಆವರಣದಲ್ಲಿರುವ ಶಾಸನಗಳೆಲ್ಲವೂ[೮೮] ಪ್ರಕಟಗೊಂಡಿವೆ. ಕಲ್ಯಾಣ ಚಾಲುಕ್ಯ ಎರಡನೇ ಸೋಮೇಶ್ವರನ ಕಾಲಕ್ಕೆ ಸೇರಿದ ಕ್ರಿ.ಶ.೧೦೭೮ರ ತೇದಿವುಳ್ಳ ಶಾಸನವು ಅಹವಮಲ್ಲರ ಮಗಳು ಹಾಗು ಭುವನೈಕಮಲ್ಲನ ತಂಗಿಯಾದ ಸುಗ್ಗಲದೇವಿಯು ನಿಡಗುಂದಿ ಯನ್ನಾಳುವಾಗಿ ಸ್ವಯಂಭೂದೇವರಿಗೆ ಭೂದಾನ ನೀಡಿದ ಉಲ್ಲೇಖವನ್ನು ಹೊಂದಿದೆ. ಇದೇ ಕಲ್ಲಿನಲ್ಲಿರುವ ಇನ್ನೊಂದು ಶಾಸನ ಆರನೇ ವಿಕ್ರಮಾದಿತ್ಯನ ಸೇರಿದ್ದಾಗಿದೆ. ಇದು ೧೧೧೮ರ ತೇದಿಯನ್ನು ಹೊಂದಿದ್ದು, ವಿವಿಧ ವ್ಯಕ್ತಿಗಳಿಂದ ಕೇಶವಾದಿತ್ಯ ದೇವರಿಗೆ ಭೂದಾನ ನೀಡಿದ ಉಲ್ಲೇಖವನ್ನು ಹೊಂದಿದೆ. ಇದೇ ದೇವಾಲಯದಲ್ಲಿರುವ ಇನ್ನೊಂದು ಶಾಸನವು ಯಾದವ ಅರಸ ಸಿಂಘಣನ ಕಾಲಕ್ಕೆ ಸೇರಿದ್ದಾಗಿದ್ದು (ಕ್ರಿ.ಶ.೧೨೩೩) ಶ್ರೀಕರಣ ವಾಮನದೇವನಿಂದ ಸ್ವಯಂಭೂ ಕಲಿದೇವರಿಗೆ ಭೂದಾನ ನೀಡಿರುವ ಉಲ್ಲೇಖ ಹಾಗೂ ಇದೇ ಕಲ್ಲಿನಲ್ಲಿರುವ ಇನ್ನೆರಡು ಶಾಸನಗಳು ಠಕ್ಕುರನಾಯಕನಿಂದ ಸ್ವಯಂಭೂ ದೇವರಿಗೆ ಭೂದಾನ ಹಾಗೂ ಬಮ್ಮದೇವನಾಯಕನ ಮಗ ಗೋವಣ್ಣನು ಕೇಶವಾದಿತ್ಯ ದೇವಾಲಯ ಕಟ್ಟಿಸಿ ಬಿಟ್ಟ ಭೂದಾನದ ಉಲ್ಲೇಖಗಳನ್ನು ಹೊಂದಿವೆ.

## ೩೧. ವೀರಭದ್ರ ದೇವಾಲಯ

ಯಾವಗಲ್ಲ ಗ್ರಾಮದಲ್ಲಿ ೧೨-೧೩ನೇ ಶತಮಾನಕ್ಕೆ ಸೇರಿದ ಕಲ್ಯಾಣ ಚಾಲುಕ್ಯ ಶೈಲಿಯ ವೀರಭದ್ರ ದೇವಾಲಯವು[೮೯] ಪ್ರಾಚೀನ ಸ್ಮಾರಕವಾಗಿದೆ. ಉತ್ತರಾಭಿಮುಖವಾದ ದೇವಾಲಯವು ಗರ್ಭಗೃಹ, ಅಂತರಾಳ ಹಾಗೂ ಮಂಟಪ ಭಾಗಗಳನ್ನು ಹೊಂದಿದೆ. ಗರ್ಭಗೃಹವು ಭುವನೇಶ್ವರಿಯಿಂದ ಅಲಂಕೃತಗೊಂಡಿದ್ದು ಪ್ರಾಚೀನ ಸುಂದರ ಕೆತ್ತನೆಯುಳ್ಳ ವೀರಭದ್ರನ ಶಿಲ್ಪವನ್ನು ಹೊಂದಿದೆ. ಅಲ್ಲದೇ ಭುವನೇಶ್ವರಿಯನ್ನೊಳಗೊಂಡ ಅಂತರಾಳವನ್ನು ಹೊಂದಿದೆ. ಮಂಟಪದಲ್ಲಿ ನಾಲ್ಕು ಕಂಬಗಳಿದ್ದು ಅವುಗಳು ಬುಡದಲ್ಲಿ ಚೌಕಾಕಾರವಾಗಿದ್ದು, ಮಧ್ಯ ದಲ್ಲಿಯೂ ಚೌಕಾಕಾರವಾಗಿದ್ದು ಮೇಲ್ಭಾಗದಲ್ಲಿ ಘಟ ಹಾಗೂ ಬೋದಿಗೆಯ ಜೋಡಣೆಯನ್ನು ಹೊಂದಿವೆ. ಅಲ್ಲದೆ ಇಲ್ಲಿ ಇತ್ತೀಚಿನ ನಂದಿಯ ವಿಗ್ರಹವನ್ನಿಡಲಾಗಿದೆ. ಸರಳ ಅಧಿಷ್ಠಾನವನ್ನು ಹೊಂದಿದ ದೇವಾಲಯಕ್ಕೆ ಕದಂಬ-ನಾಗರಶೈಲಿಯ ಶಿಖರವಿದ್ದು ಸುಣ್ಣ ಬಣ್ಣ ಬಳಿಯಲಾಗಿದೆ. ದೇವಾಲಯದ ಆವರಣದಲ್ಲಿ ಭಗ್ನಗೊಂಡ ಸಪ್ತಮಾತೃಕೆಯ ಶಿಲ್ಪ ನಂದಿಶಿಲ್ಪ ಹಾಗೂ ವೀರಭದ್ರನ ಬಿಡಿಶಿಲ್ಪಗಳಿವೆ. ಇದೇ ಗ್ರಾಮದಲ್ಲಿ ಈಶ್ವರ ಎಂದು ಕರೆಯಲ್ಪಡುವ ಇನ್ನೊಂದು

ದೇವಾಲಯವಿದೆ. ಪ್ರಸ್ತುತ ದೇವಾಲಯವು ಕೇವಲ ಗರ್ಭಗೃಹವನ್ನು ಹೊಂದಿದ್ದು ಪ್ರಾಚೀನ ಲಿಂಗವನ್ನು ಒಳಗೊಂಡಿದೆ.

ಯಾವಗಲ್ಲ ಗ್ರಾಮದ ಮೂರು ಶಾಸನಗಳು[೫೦] ಪ್ರಕಟಗೊಂಡಿವೆ. ಕ್ರಿ.ಶ.೧೨೭೧ರ ತೇದಿವುಳ್ಳ ಶಾಸನವು ಯಾದವ ಅರಸ ಮಹಾದೇವನ ಕಾಲಕ್ಕೆ ಸಂಬಂಧಿಸಿದ್ದು, ಬೆಳುವಣಿಗೆಯ ದೇವಾಲಯಕ್ಕೆ ದಾನ ಕೊಟ್ಟಿರುವ ಮಾಹಿತಿ ಇದರಲ್ಲಿದೆ. ಇನ್ನೆರಡು ಶಾಸನಗಳು ಕ್ರಮವಾಗಿ ಕ್ರಿ.ಶ.೧೫೫೫ ಹಾಗೂ ಕ್ರಿ.ಶ.೧೮ನೇ ಶತಮಾನಕ್ಕೆ ಸೇರಿದವುಗಳು. ಕ್ರಿ.ಶ. ೧೫೫೫ರ ಶಾಸನದಲ್ಲಿ ಮಲಿಕ್ ಸಾಹೇಬನ ಆದೇಶದಂತೆ ದತ್ತಿ ನೀಡಿರುವ ಉಲ್ಲೇಖವನ್ನು ಒಳಗೊಂಡಿದೆ. ಆದರೆ ಈ ಮಲಿಕಾಸಾಹೇಬ ಯಾರು ಎಂಬುದು ತಿಳಿದುಬಂದಿಲ್ಲ. ೧೮ನೇ ಶತಮಾನದ ತೇದಿವುಳ್ಳ ಶಾಸನವು ಹೂವಿನ ಹಡಗಲಿಯಲ್ಲಿ ನರಹರಿ ಭಟ್ಟನಿಗೆ ಭೂಮಿಯನ್ನು ದಾನಬಿಟ್ಟ ಮಾಹಿತಿಯನ್ನು ನೀಡುತ್ತದೆ. ಮೇಲೆ ವಿವರಿಸಿದ ಮೂರು ಶಾಸನಗಳು ಬೇರೆ ಬೇರೆ ಗ್ರಾಮಗಳ ವಿವರಗಳನ್ನು ನೀಡುತ್ತವೆಯೇ ಹೊರತು ಯಾವಗಲ್ಲ ಗ್ರಾಮದ ಬಗೆಗೆ ಯಾವುದೇ ಮಾಹಿತಿ ನೀಡುವುದಿಲ್ಲ.

## ೩.೨. ಸಂಗಮೇಶ್ವರ ದೇವಾಲಯ

ಊಣಚಗೇರಿ ಗ್ರಾಮದಲ್ಲಿರುವ ೧೨-೧೩ನೇ ಶತಮಾನಕ್ಕೆ ಸೇರಿದ ಸಂಗಮೇಶ್ವರ ದೇವಾಲಯವನ್ನು[೫೧] ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ. ಈ ದೇವಾಲಯವನ್ನು ಸಂಗಮೇಶ್ವರ, ಕಲ್ಗುಡಿ, ಈಶ್ವರ ದೇವಾಲಯ ಎಂಬ ಹೆಸರುಗಳಿಂದ ಕರೆಯುತ್ತಾರೆ.

ಚೌಕಾಕಾರದ ತಲವಿನ್ಯಾಸವನ್ನು ಹೊಂದಿರುವ ದೇವಾಲಯವು ಭಾಗಶಃ ನಾಶಗೊಂಡಿದೆ. ಗರ್ಭಗೃಹ, ಅಂತರಾಳ ಹಾಗೂ ನವರಂಗ ಭಾಗಗಳಿದ್ದು, ಪ್ರಸ್ತುತದಲ್ಲಿ ನವರಂಗ ಭಾಗವು ಬಿದ್ದು ಹೋಗಿದೆ. ಗರ್ಭಗೃಹವು ಸುಂದರ ಕೆತ್ತನೆಯ ಭುವನೇಶ್ವರಿಯನ್ನು ಹೊಂದಿದ್ದು, ಇತ್ತೀಚಿನ ತ್ರಿಕೋನಾಕಾರಾದ ಪೀಠದ ಮೇಲೆ ವೃತ್ತಾಕಾರದ ಲಿಂಗವನ್ನು ಒಳಗೊಂಡಿದೆ. ಅಲ್ಲದೆ ಪಂಚಪಟ್ಟಿಕೆಯನ್ನೊಳಗೊಂಡ ಬಾಗಿಲವಾಡವು ಸರಳವಾಗಿದೆ. ಈ ದೇವಾಲಯವು ಅಂತರಾಳ ಭಾಗವನ್ನು ಹೊಂದಿದ್ದು ನಂದಿ ವಿಗ್ರಹವನ್ನಿರಿಸಲಾಗಿದೆ. ಇದರ ಬಾಗಿಲವಾಡಕ್ಕೆ ಜಾಲಾಂಧ್ರಗಳನ್ನು ನಿರ್ಮಿಸಲಾಗಿದೆ. ನವರಂಗದ ಮಧ್ಯದಲ್ಲಿ ನಾಲ್ಕು ಸರಳ ರಚನೆಯ ಕಂಬಗಳಿದ್ದು ಅವುಗಳನ್ನೊಳಗೊಂಡಂತೆ ಒಳ ಮೇಲ್ಛಾವಣಿಯಲ್ಲಿ ಸುಂದರ ಭುವನೇಶ್ವರಿಯನ್ನು ಕೆತ್ತಲಾಗಿದೆ. ಅಲ್ಲದೆ ಸುತ್ತಲೂ ಇರುವ ಕಂಬಗಳು ಗಂಟೆಯಾಕಾರದ ರಚನೆಯುಳ್ಳವುಗಳಾಗಿವೆ. ಈ ಭಾಗದ ಇಕ್ಕೆಲಗಳಲ್ಲಿ ಎರಡು ಕೋಷ್ಠಗಳನ್ನು ಅಳವಡಿಸಿದ್ದು, ಅವು ಬರಿದಾಗಿವೆ.

ಅಲ್ಲದೆ ಇಲ್ಲಿ ಕಕ್ಷಾಸನದ ವ್ಯವಸ್ಥೆಯಿದ್ದು ಪ್ರಸ್ತುತದಲ್ಲಿ ನವರಂಗದ ಜೊತೆಗೆ ಇದು ಕೂಡಾ ಹಾಳಾಗಿದೆ.

ದೇವಾಲಯದ ಅಧಿಷ್ಠಾನವು ಉಪಾನ, ಕಂಪ, ಕಪೋತ ಹಾಗೂ ಗಳ ಭಾಗಗಳನ್ನು ಹೊಂದಿದೆ. ಹೊರಭಿತ್ತಿಯು ಸರಳವಾಗಿದ್ದು ಶಿಖರಭಾಗವು ಸಂಪೂರ್ಣವಾಗಿ ನಾಶಗೊಂಡಿದೆ. ದೇವಾಲಯದ ಸಮುಚ್ಛಯದಲ್ಲಿ ಅನಂತಶಯನ, ಸ್ತ್ರೀ ದೇವತೆಯ ಬಿಡಿ ಶಿಲ್ಪಗಳನ್ನು ಕಾಣಬಹುದು.

ಊಣಚಗೆರಿ ಗ್ರಾಮಕ್ಕೆ ಸೇರಿದ ನಾಲ್ಕು ಶಾಸನಗಳು[೫೨] ಪ್ರಕಟವಾಗಿವೆ. ಗ್ರಾಮದ ಸಾರ್ವಜನಿಕ ಬಾವಿಯ ಬಳಿ ಸಿಕ್ಕಿರುವ ಕಲ್ಯಾಣ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಕಾಲದ ಕ್ರಿ.ಶ.೧೦೭೭ರ ತೇದಿವುಳ್ಳ ಶಾಸನ ಕೂಂಟಗೆಯ ಕಲಿದೇವರಿಗೆ ದತ್ತಿ ಬಿಟ್ಟಿರುವ ಮಾಹಿತಿಯನ್ನು ಉಲ್ಲೇಖಿಸುತ್ತದೆ. ಕ್ರಿ.ಶ.೧೧೬೪ರ ತೇದಿವುಳ್ಳ ಶಾಸನವು ಸಿಂದ ವಂಶದ ಚಾವುಂಡರಸನು ದಾನ ನೀಡಿರುವ ಸಂಗತಿಯನ್ನು ತಿಳಿಸುತ್ತದೆ. ಈ ಶಾಸನವು ತೃಟಿತವಾಗಿದ್ದರಿಂದ ಹೆಚ್ಚಿನ ವಿಷಯ ತಿಳಿದುಬರುವುದಿಲ್ಲ.

## ೩.೩. ಕಾಲಕಾಲೇಶ್ವರ ದೇವಾಲಯ

ಕಾಲಕಾಲೇಶ್ವರ ಬೆಟ್ಟದ ಮೇಲಿರುವ ಕಳಕಪ್ಪನ ದೇವಾಲಯವು[೫೩] ೧೨-೧೩ನೇ ಶತಮಾನದಲ್ಲಿ ನಿಸರ್ಗ ನಿರ್ಮಿತ ಬೆಟ್ಟದಲ್ಲಿ ಕಲ್ಯಾಣಚಾಲುಕ್ಯರ ಶೈಲಿಯನ್ನೊಳಗೊಂಡು ದಕ್ಷಿಣಾಭಿಮುಖವಾಗಿ ನಿರ್ಮಾಣವಾಗಿದೆ.

ಸುಮಾರು ಎರಡುನೂರು ಅಡಿ ಎತ್ತರದಲ್ಲಿ ಪ್ರಕೃತಿದತ್ತ ಬೆಟ್ಟವನ್ನು ಬಳಸಿಕೊಂಡು ದೇವಾಲಯ ನಿರ್ಮಿಸಲಾಗಿದೆ. ಈ ದೇವಾಲಯವನ್ನು ತಲುಪಲು ನೂರಾರು ಮೆಟ್ಟಿಲುಗಳ ಸೋಪಾನವಿದೆ. ಸಹಜವಾಗಿ ನಿರ್ಮಾಣವಾದ ಬೆಟ್ಟದ ಸಣ್ಣ ಗುಹೆಗಳನ್ನು ಗರ್ಭಗೃಹಗಳನ್ನಾಗಿ ಮಾಡಿಕೊಳ್ಳಲಾಗಿದ್ದು. ಅವು ದಕ್ಷಿಣಾಭಿಮುಖವಾಗಿದೆ. ಗರ್ಭಗೃಹದಲ್ಲಿ ನಿಂತ ವೀರಭದ್ರನ ಶಿಲ್ಪವಿದೆ. ಇದು ಕೈಯಲ್ಲಿ ಖಡ್ಗವನ್ನು ಹಿಡಿದು ವಸ್ತ್ರಧಾರಿಯಾಗಿದ್ದು, ಶಿರಭಾಗವು ಉದ್ದನೆಯ ಕಿರಿಟದಲಂಕರಣೆಯಿಂದ ಕೂಡಿದೆ. ಇತ್ತೀಚೆಗೆ ಗಾರೆಗಚ್ಚುಗಳಿಂದ ಆಧುನಿಕ ಶೈಲಿಯಲ್ಲಿ ಗರ್ಭ ಗೃಹದ ಮೇಲಿನ ಶಿಖರಭಾಗವನ್ನು ಕಟ್ಟಲಾಗಿದೆ. ಈ ಗರ್ಭಗೃಹ ಮುಂದೆ ವಿಶಾಲವಾದ, ಮೇಲ್ಛಾವಣೆ ಇಲ್ಲದ ನವರಂಗವಿದೆ. ಗರ್ಭಗೃಹದ ಮೂಲಕ ಸಾಗಿದರೆ ಒಳಗೆ ಇನ್ನೊಂದು ಗರ್ಭಗೃಹ ಮತ್ತು ಅದರ ಮುಂದಿರುವ ತೆರೆದ ನವರಂಗ ಸಿಗುವುದು. ಈ ಗರ್ಭಗೃಹದಲ್ಲಿ ವೀರಭದ್ರನ ಲೋಹದ ಮೂರ್ತಿ ಇದೆ. ಗರ್ಭಗೃಹ ಎದುರಿಗೆ ಎರಡು ನಂದಿಶಿಲ್ಪಗಳನ್ನು ಇಡಲಾಗಿದ್ದು ಗರ್ಭಗೃಹದ ಶಿಖರಭಾಗವು ಕೂಡ ಆಧುನಿಕ ಶೈಲಿಯಲ್ಲಿದೆ. ಗರ್ಭಗೃಹದ

ಎದುರಿಗೆ ನವರಂಗದಲ್ಲಿ ನಿಸರ್ಗ ನಿರ್ಮಿತ ಬೆಟ್ಟವಿದ್ದ ಸಣ್ಣದರಿಂದ ದೊಡ್ಡಗಾತ್ರದವರೆಗೆ ಲಿಂಗಗಳನ್ನು ಇಡಲಾಗಿದ್ದು ಅವುಗಳ ಮೇಲ್ಭಾಗದಲ್ಲಿ ಬೆಟ್ಟದ ಗೋಡೆಯಲ್ಲಿ ಲಿಂಗ ಹಾಗೂ ಅದರ ಮುಂದೆ ಕುಳಿತಿರುವ ನಂದಿಯ ಚಿತ್ರವನ್ನು ಕಂಡಿರಿಸಲಾಗಿದೆ. ಈ ಗರ್ಭಗೃಹದ ಪಕ್ಕದಲ್ಲಿಯೇ ಒಂದು ಸಣ್ಣ ಗುಹೆಯಾಕಾರದ ಗೂಡು ಇದ್ದು ಅದು ಬರಿದಾಗಿದೆ. ಆದರೆ ಅದರ ಮುಂದೆ ಪೀಠವಿಲ್ಲದೆ, ಕೇವಲ ರುದ್ರಭಾಗ ಕಾಣುವಂತಹ ಎರಡು ಲಿಂಗಗಳು, ಬೆಟ್ಟದ ಗೋಡೆಯ ಮೇಲೆ ಕೆಲವು ಶಿಲ್ಪಗಳನ್ನು ಚಿತ್ರಿಸಿದ್ದಾರೆ. ಎರಡೂ ಗರ್ಭಗೃಹಗಳನ್ನೊಳಗೊಂಡಂತೆ ಇರುವ ನವರಂಗದಲ್ಲಿ ಇನ್ನೊಂದು ಪ್ರವೇಶ ದ್ವಾರ ಇದ್ದು, ಅಲ್ಲಿ ಬೆಟ್ಟದ ಮೇಲಿಂದ ಮರದ ಬೇರುಗಳ ಮುಖಾಂತರ ಸತತವಾಗಿ ನೀರು ಹರಿಯುತ್ತದೆ. ಈ ದೇವಾಲಯವನ್ನು ಭಾಗಶಃ ನವೀಕರಿಸಿ ಕಟ್ಟಲಾಗಿದೆ. ಹೀಗಾಗಿ ಅಲ್ಲಿರುವ ಪ್ರಾಚೀನ ಭಗ್ನಶಿಲ್ಪಗಳನ್ನು ಗೋಡೆ ಹಾಗೂ ಗೂಡುಗಳಲ್ಲಿ ಇಡಲಾಗಿದೆ. ಅವುಗಳಲ್ಲಿ ಪ್ರಮುಖವಾಗಿ ಶಿವ, ವಿಷ್ಣು ಹಾಗೂ ಬ್ರಹ್ಮನ ಮೂರ್ತಿ ಶಿಲ್ಪಗಳಿವೆ. ಮಹಿಷಾಸುರಮರ್ದಿನಿಯ ಶಿಲ್ಪ, ಕೈಮುಗಿದು ಕುಳಿತಿರುವ ದ್ವಾರಪಾಲರ ಶಿಲ್ಪ, ಸಪ್ತಮಾತೃಕೆಯ ಶಿಲ್ಪ, ನಾಗಶಿಲ್ಪ ಹಾಗೂ ಮಹಾಸತಿ ಶಿಲ್ಪಗಳೂ ಇವೆ. ಈ ಮಹಾಸತಿ ಶಿಲ್ಪವನ್ನು ನೆಲಹಾಸಕ್ಕಾಗಿ ಉಪಯೋಗಿಸಲಾಗಿದೆ. ಇನ್ನೊಂದು ಶಿಲ್ಪವು ಅಧಿಕಾರಿ ದಂಪತಿಗಳದ್ದು. ಅಧಿಕಾರಿಯ ತಲೆಗೆ ಮುಂಡಾಸನ್ನು ಸುತ್ತಿದ್ದು ಗಡ್ಡವನ್ನು ಬಿಟ್ಟಂತೆ ಕೆತ್ತಲಾಗಿದೆ. ದಂಪತಿಗಳು ಗಂಭೀರ ಮುಖ ಭಾವವನ್ನು ಹೊಂದಿರುವರು. ಅಲ್ಲದೇ ಇಲ್ಲಿ ಕುದುರೆ ಮೇಲೆ ಕುಳಿತು ಸವಾರಿ ಮಾಡುತ್ತಿರುವ ಆಕರ್ಷಕ ಶಿಲ್ಪ ಕೆತ್ತನೆಯೂ ಇದೆ. ಗಣಪತಿ ಹಾಗೂ ನಂದಿಶಿಲ್ಪಗಳನ್ನೂ ದೇವಾಲಯದ ಆವರಣದಲ್ಲಿ ಇಡಲಾಗಿದೆ.

ಕಾಲಕಾಲೇಶ್ವರ ಸ್ಥಳದಲ್ಲಿ ಒಟ್ಟು ಐದು ಶಾಸನಗಳಿದ್ದು[೫೪] ಅವು ಪ್ರಕಟವಾಗಿವೆ. ಕಲ್ಯಾಣ ಚಾಲುಕ್ಯ ನಾಲ್ಕನೇ ಸೋಮೇಶ್ವರನ ಕಾಲಕ್ಕೆ ಸಂಬಂಧಿಸಿದ ಕ್ರಿ.ಶ.೧೧೯೪ರ ತೇದಿಯುಳ್ಳವಾಗಿದ್ದು, ಸಿಂದವಂಶದ ಆಚಿದೇವರಸನಿಂದ ಕಾಲಕಾಲೇಶ್ವರ ದೇವರಿಗೆ ಭೂಮಿಯನ್ನು ದಾನ ಮಾಡಿರುವ ಉಲ್ಲೇಖವಿದೆ. ಇದು ಕ್ರಿ.ಶ.೧೨೨೦ರ ಕಾಲವನ್ನು ಸೂಚಿಸುವ ಹಾಗೂ ಯಾದವ ಸಿಂಘಣನ ಕಾಲದ್ದು. ಇದೇ ದೇವಾಲಯದ ಇನ್ನೊಂದು ಶಾಸನ ವಿಜಯನಗರದರಸ ಎರಡನೆಯ ಹರಿಹರನಿಗೆ ಸಂಬಂಧಿಸಿದ್ದು, ಬೊಮ್ಮಗೌಡನ ಉಲ್ಲೇಖ ನೀಡುತ್ತದೆ. ಆದರೆ ಇದು ತ್ರುಟಿತಗೊಂಡಿರುವುದರಿಂದ ಹೆಚ್ಚಿನ ಮಾಹಿತಿ ತಿಳಿಯುವುದಿಲ್ಲ. ಕಾಲಕಾಳೇಶ್ವರ ಲಿಂಗದ ಪ್ರಭಾವಳಿಯಲ್ಲಿರುವ ಮತ್ತೊಂದು ಶಾಸನವು ಮಹಾದೇವನ ಮಗ ನಾರಾಯಣ ದಾತೆಯನಿಂದ ಕಾಳಕಾಳೇಶ್ವರನಿಗೆ ಪ್ರಭಾವಳಿಯನ್ನು ಕಾಣಿಕೆ ರೂಪದಲ್ಲಿ ನೀಡಿರುವ ಮಾಹಿತಿ ನೀಡುತ್ತದೆ. ಈ ಶಾಸನದ ಕಾಲ ಹಾಗೂ ಸಂಬಂಧಿಸಿದ ಕರ್ತೃವಿನ ಬಗೆಗೆ ಸ್ಪಷ್ಟ ಮಾಹಿತಿ ಇಲ್ಲ.

## ೩೪. ಕಂಚೇಶ್ವರ ಹಾಗೂ ಬಸವಣ್ಣ ದೇವಾಲಯಗಳು

ಕೊಡಗಾನೂರು ಗ್ರಾಮದಲ್ಲಿರುವ ಕಂಚೇಶ್ವರ ದೇವಾಲಯವು[೫೪] ೧೨-೧೩ನೇ ಶತಮಾನದಲ್ಲಿ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾದ ದೇವಾಲಯವಾಗಿದೆ. ಪ್ರಸ್ತುತ ದೇವಾಲಯವು ಕೇವಲ ಗರ್ಭಗೃಹವನ್ನಷ್ಟೆ ಹೊಂದಿದೆ. ಗರ್ಭಗೃಹದಲ್ಲಿ ಭುವನೇಶ್ವರಿಯ ಅಲಂಕರಣೆಯಿದ್ದು ಲಿಂಗವಿಲ್ಲದೆ ಸ್ಥಳೀಯರು ಒಂದೆರಡು ಕಲ್ಲುಗಳನ್ನಿಟ್ಟು ಅವನ್ನೆ ದೇವತೆಯೆಂದು ಪೂಜೆಗೈಯುತ್ತಾರೆ.

ಇದೇ ಗ್ರಾಮದಲ್ಲಿರುವ ಬಸವಣ್ಣ ದೇವಾಲಯವು[೫೬] ಸಂಪೂರ್ಣವಾಗಿ ನಾಶಗೊಂಡಿದ್ದು ಬಿದ್ದು ಹೋದ ಗೋಡೆಗಳ ಮಧ್ಯೆ ಪ್ರಾಚೀನ ದೇವಾಲಯದ ಕೆಲವು ಅವಶೇಷಗಳನ್ನು ಇಡಲಾಗಿದೆ.

ಮೇಲಿನ ದೇವಾಲಯಗಳಲ್ಲದೆ ಇನ್ನೂ ಕೆಲವು ಪ್ರಾಚೀನ ದೇವಾಲಯಗಳಿವೆ. ಅವುಗಳು ಸಂಪುರ್ಣವಾಗಿ ನವೀಕರಣಗೊಂಡಿದ್ದು, ಅಲ್ಲಲ್ಲಿ ಪ್ರಾಚೀನತೆಯ ಲಕ್ಷಣಗಳನ್ನು ಕಾಣಬಹುದು. ಅಲ್ಲದೆ ಸಪ್ತಮಾತೃಕೆ, ಇಂದ್ರಾಣಿಯರ ಮತ್ತು ಭಗ್ನಗೊಂಡ ನಂದಿ ಶಿಲ್ಪಗಳನ್ನು ಕಾಣಬಹುದು.

## ೩೫. ವೀರಭದ್ರ ದೇವಾಲಯ

ಕೊಡಗಾನೂರು ಗ್ರಾಮದಲ್ಲಿರುವ ವೀರಭದ್ರ ದೇವಾಲಯವನ್ನು[೫೭] ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ. ೧೨-೧೩ನೇ ಶತಮಾನದಲ್ಲಿ ಉತ್ತರಾಭಿಮುಖವಾಗಿ ನಿರ್ಮಿಸಲಾಗಿದೆ.

ಚೌಕಾಕಾರದ ತಲವಿನ್ಯಾಸವನ್ನು ಹೊಂದಿರುವ ಈ ದೇವಾಲಯವು ಮೂರು ಗರ್ಭಗೃಹಗಳನ್ನೊಂಡ ತ್ರಿಕೂಟ ರಚನೆಯಾಗಿದೆ. ತಿರ್ಯಙ್ಮುಖ ಕ್ರಮದಲ್ಲಿ ದೇವಾಲಯವು ಗರ್ಭಗೃಹ, ಅಂತರಾಳ, ಅದರ ಜೋಡಣೆಯಾಗಿ ಇನ್ನೊಂದು ಅಂತರಾಳ ಭಾಗ ಹಾಗೂ ವಿಶಾಲವಾದ ನವರಂಗವಿದ್ದು ಇಕ್ಕೆಲಗಳಲ್ಲಿ ಇನ್ನೆರಡು ಗರ್ಭಗೃಹಗಳು ಮತ್ತು ಮುಖಮಂಟಪದ ಭಾಗವನ್ನು ಒಳಗೊಂಡಿದೆ. ಮಧ್ಯದಲ್ಲಿರುವ ಗರ್ಭಗೃಹವು ಸುಂದರವಾದ ಭುವನಶ್ವರಿಯನ್ನು ಒಳಗೊಂಡಿದ್ದು ವೃತ್ತಾಕಾರದ ಲಿಂಗವನ್ನು ಹೊಂದಿದೆ. ಬಾಗಿಲವಾಡವು ಸರಳವಾಗಿದ್ದು ಗಜಲಕ್ಷ್ಮಿಯ ಉಬ್ಬುಶಿಲ್ಪವನ್ನು ಹೊಂದಿದೆ. ಈ ಗರ್ಭಗೃಹಕ್ಕೆ ಎರಡು ಅಂತರಾಳ ಭಾಗಗಳಿದ್ದು ಬರಿದಾಗಿವೆ. ಎರಡನೇ ಅಂತರಳದ, ಬಾಗಿಲವಾಡವೂ ಸರಳವಾಗಿದ್ದು ಲಲಾಟ ದಲ್ಲಿ ಪದ್ಮಾಸನದಲ್ಲಿ ಕೈಮುಗಿದು ಕುಳಿತ ಶಿಲ್ಪದ ಕೆತ್ತನೆಯಿದೆ. ನವರಂಗವು ವಿಶಾಲವಾಗಿದ್ದು, ಇಕ್ಕೆಲಗಳಲ್ಲಿ ಇನ್ನೆರಡು ಗರ್ಭಗೃಹಗಳಿವೆ. ಎರಡೂ ಗರ್ಭಗೃಹಗಳಲ್ಲೂ, ಚೌಕಾಕಾರ ಪೀಠದ ಮೇಲೆ ವೃತ್ತಾಕಾರದ ಲಿಂಗಗಳಿದ್ದು ಭುವನೇಶ್ವರಿಯ ಅಲಂಕರಣೆಯನ್ನು ಹೊಂದಿವೆ.

ಮಧ್ಯಭಾಗದಲ್ಲಿ ನಾಲ್ಕು ಕಂಬಗಳನ್ನು ಒಳಗೊಂಡ ಎತ್ತರದ ಕಟ್ಟೆಯ ರಚನೆಯಿದ್ದು ಉತ್ತಾರಾಭಿಮುಖ ಗರ್ಭಗೃಹಕ್ಕೆ ಮುಖಮಾಡಿರುವ ಅಲಂಕೃತ ನಂದಿ ವಿಗ್ರಹವನ್ನು ಇಡಲಾಗಿದೆ. ಹಾಗೂ ಒಳಮೇಲ್ಛಾವಣಿಯಲ್ಲಿ ಸುಂದರ ಕೆತ್ತನೆಯ ಭುವನೇಶ್ವರಿಯನ್ನು ಕಂಡರಿಸಲಾಗಿದೆ. ನವರಂಗ ಭಾಗವು ವಿಶಾಲವಾಗಿದ್ದು ಅನೇಕ ಬಿಡಿಶಿಲ್ಪಗಳನ್ನು ಇಡಲಾಗಿದೆ. ಇತ್ತೀಚಿನ ವೀರಭದ್ರನ ಮತ್ತು ಕಾಳಮ್ಮನ ಶಿಲ್ಪಗಳು ಹಾಗೂ ಗಣೇಶ ಅನಂತಶಯನ ಮತ್ತು ಇನ್ನಿತರ ಭಗ್ನಗೊಂಡ ಪ್ರಾಚೀನ ಶಿಲ್ಪಗಳನ್ನು ಇಡಲಾಗಿದೆ. ಚತುರ್ಭುಜಧಾರಿಯಾಗಿರುವ ಗಣೇಶನ ಶಿಲ್ಪವು ಎರಡು ಕೈಗಳಲ್ಲಿ ಪದ್ಮ, ಒಂದು ಕೈಯಲ್ಲಿ ಅಂಕುಶ ಹಾಗೂ ಇನ್ನೊಂದು ಕೈಯಲ್ಲಿ ಸೊಂಡಿಲನ್ನು ಹಿಡಿದಿರುವ ಕೆತ್ತನೆ ಇದೆ. ಇಲ್ಲಿರುವ ಅನಂತಶಯನ ಶಿಲ್ಪವೂ ಸುಂದರವಾಗಿದೆ ಇದು ನಾಭಿಬ್ರಹ್ಮನ ಕೆತ್ತನೆಯನ್ನೊಳಗೊಂಡಿದ್ದು, ಶಿರದ ಹಿಂದೆ ನಾಗ ಬಂಧದ ಚಿತ್ರಣವನ್ನು ಕಾಣಬಹುದು. ಅಲ್ಲದೆ ಪಾದಗಳಡಿಯಲ್ಲಿ ಶ್ರೀದೇವಿ ಭೂದೇವಿಯರು ಕುಳಿತಿರುವ ಚಿತ್ರಣವಿದೆ. ಪ್ರಭಾವಳಿಯಲ್ಲಿ ದಶಾವತಾರದ ಕಥಾಸಂದರ್ಭವನ್ನು ಕೆತ್ತಲಾಗಿದೆ. ನವರಂಗದ ಬಾಗಿಲವಾಡವು ಸರಳವಾಗಿದ್ದು ಗುರುತಿಸಲಾಗದ ಶಿಲಾ ಫಲಕವನ್ನೊಳಗೊಂಡಿದೆ. ದೇವಾಲಯಕ್ಕೆ ಮುಖಮಂಟಪವಿದ್ದು, ಅದನ್ನು ಸಂಪೂರ್ಣವಾಗಿ ದುರಸ್ತಿಗೊಳಿಸಿದ್ದಾರೆ. ಅಲ್ಲದೆ ಅಧಿಷ್ಠಾನ ಹಾಗೂ ಶಿಖರ ಭಾಗಗಳು ಕಾಣಸಿಗುವುದಿಲ್ಲ. ದೇವಾಲಯದ ಎಡ ಭಾಗದಲ್ಲಿ ಒಂದು ಚೌಕಾಕಾರದ ಕೋಣೆಯ ಪತ್ತೆಯಾಗಿದ್ದು ಇದು ದೇವಾಲಯಕ್ಕೆ ಸಂಬಂಧಿಸಿದ್ದೆಂದು ತಿಳಿಯಬಹುದು. ಈ ಕೋಣೆಯು ನಾಲ್ಕು ಮೂಲೆಗಳಲ್ಲೂ ಅರ್ಧಗಂಬಗಳನ್ನು ಹಾಗೂ ಅವುಗಳಿಗೆ ಬೋಧಿಗೆಯನ್ನು ಅಳವಡಿಸಿರುವುದನ್ನು ಕಾಣಬಹುದು. ದೇವಾಲಯದಲ್ಲಿ ಎರಡು ಶಾಸನಗಳು[೫೮] ದೊರೆತಿದ್ದು ಅವುಗಳಲ್ಲಿ ಒಂದು ಪ್ರಕಟಗೊಂಡಿದೆ. ಇದು ಕ್ರಿ.ಶ.೧೨೩೨ರ ತೇದಿವುಳ್ಳ ಯಾದವ ಸಿಂಘಣನ ಕಾಲದ ಶಾಸನವಾಗಿದ್ದು ಕೊಡಗಾನೂರು ಗ್ರಾಮ ಮತ್ತು ದೊಡ್ಡೇಶ್ವರ ಎಂಬ ಉಲ್ಲೇಖವನ್ನು ಹೊಂದಿದೆ. ಇದು ಅತಿ ತೃಟಿತವಾಗಿದ್ದರಿಂದ ಮಾಹಿತಿ ಲಭ್ಯವಾಗಿಲ್ಲ.

## ೩೬. ಮೂಲ ಬ್ರಹ್ಮೇಶ್ವರ ದೇವಾಲಯ

ಶಾಸನಗಳಲ್ಲಿ 'ಕಿರುನರೆಂಗಲ್' ಎಂದು ಕರೆಯಲ್ಪಟ್ಟ ಕೋಡಿಕೊಪ್ಪ ಗ್ರಾಮದಲ್ಲಿರುವ ಮೂಲಬ್ರಹ್ಮೇಶ್ವರ ದೇವಾಲಯವನ್ನು[೫೯] ೧೨-೧೩ನೇ ಶತಮಾನದಲ್ಲಿ, ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ.

ಚಾಕಾಕಾರದ ತಲನಕ್ಷೆಯನ್ನು ಹೊಂದಿದ ದೇವಾಲಯವು ತಿರ್ಯಙ್ಮುಖ ಕ್ರಮದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಹಾಗೂ ಮುಖಮಂಟಪಗಳನ್ನು ಒಳಗೊಂಡಿದೆ.

ಗರ್ಭಗೃಹದಲ್ಲಿ ಚೌಕಾಕಾರದ ಪೀಠದ ಮೇಲೆ ವೃತ್ತಾಕಾರದ ರುದ್ರಭಾಗವುಳ್ಳ ಲಿಂಗವಿದ್ದು ಸರಳವಾದ ಬಾಗಿಲವಾಡವನ್ನು ಹೊಂದಿದೆ. ಅಂತರಾಳದಲ್ಲಿ ನಂದಿ ವಿಗ್ರಹವನ್ನಿಟ್ಟಿದ್ದು, ಬಾಗಿಲವಾಡದ ಇಕ್ಕೆಲಗಳಲ್ಲಿ ಜಾಲಾಂಧ್ರ ವ್ಯವಸ್ಥೆಯನ್ನು ಕಾಣಬಹುದು. ನವರಂಗದಲ್ಲಿ ಕಲ್ಯಾಣ ಚಾಲುಕ್ಯ ಶೈಲಿಯ ನಾಲ್ಕು ಕಂಬಗಳಿದ್ದು, ಈ ಕಂಬಗಳ ಮಧ್ಯೆ ಎತ್ತರದ ಕಟ್ಟೆಯನ್ನು ನಿರ್ಮಿಸಲಾಗಿದೆ. ಮೇಲ್ಛಾವಣಿಯ ಒಳ ಭಾಗದಲ್ಲಿ ಸುಂದರ ಕೆತ್ತನೆಯ ಭುವನೇಶ್ವರಿಯನ್ನು ಕಂಡಿರಿಸಿದ್ದಾರೆ. ನವರಂಗದಲ್ಲಿನ ಕಂಬಗಳು ಫಲಕಗಳನ್ನು ಹೊಂದಿದ್ದು ಬೋದಿಗೆಯ ಜೋಡಣೆಯನ್ನು ಮಾಡಲಾಗಿದೆ. ಅಲ್ಲದೆ ಭಿತ್ತಿಗಳಲ್ಲಿ ಮೂರು ಕೋಷ್ಠಗಳನ್ನು ನಿರ್ಮಿಸಿದ್ದಾರೆ. ಒಂದರಲ್ಲಿ ಪಾರ್ವತಿಯ ಶಿಲ್ಪವಿದ್ದು ಉಳಿದವು ಬರಿದಾಗಿವೆ. ಪಾರ್ವತಿಯ ಶಿಲ್ಪವು ತ್ರಿಶೂಲ ಹಾಗೂ ಡಮರುಧಾರಿಯಾಗಿದ್ದು, ಸವೆದು ಹೋಗಿದ್ದರಿಂದ ಸ್ಪಷ್ಟ ಚಿತ್ರಣ ಕಂಡುಬರುವುದಿಲ್ಲ. ನವರಂಗದ ಬಾಗಿಲವಾಡವು ಪಂಚ ಪಟ್ಟಿಕೆಗಳಿಂದ ಕೂಡಿದ್ದು ಅವುಗಳಲ್ಲಿ ಬಳ್ಳಿಯಾಕಾರದ ಅಲಂಕರಣೆಯನ್ನು ಕಾಣಬಹುದು. ಅಲ್ಲದೆ ಲಲಾಟದಲ್ಲಿ ಲಕ್ಷ್ಮಿಯ ಉಬ್ಬುಶಿಲ್ಪದ ಕೆತ್ತನೆಯಿದೆ. ದೇವಾಲಯವು ಮುಖಮಂಟಪ ಹಾಗೂ ಅದರಲ್ಲಿ ಕಕ್ಷಾಸನವನ್ನು ಒಳಗೊಂಡಿದೆ. ಕಕ್ಷಾಸನ ಹಾಗೂ ಭಿತ್ತಿಗೆ ತಾಗಿಕೊಂಡಂತೆ ಇಕ್ಕೆಲಗಳಲ್ಲಿ ಎರಡು ಶಾಸನಗಳನ್ನು ನಿಲ್ಲಿಸಲಾಗಿದೆ. ದೇವಾಲಯದ ಅಧಿಷ್ಠಾನ ಭಾಗವು ಉಪಾನ ಕಂಪ, ಪಟ್ಟಿಕಾ ಭಾಗಗಳನ್ನು ಒಳಗೊಂಡಿದ್ದು ಅಲಂಕರಣೆ ಇಲ್ಲದ ಭಿತ್ತಿಯನ್ನು ಹೊಂದಿದೆ ಶಿಖರ ಬಾಗವು ಕದಂಬ ನಾಗರ ಶೈಲಿಯಲ್ಲಿದ್ದು ಮೇಲ್ಭಾಗ ಜೀರ್ಣೋದ್ಧಾರಗೊಂಡಿದೆ. ದೇವಾಲಯದ ಆವರಣದಲ್ಲಿ ತ್ರುಟಿತ ವೀರಗಲ್ಲು ಶಾಸನ ಹಾಗೂ ಇತ್ತೀಚೆಗೆ ದೊರೆತ ಅಪ್ರಕಟಿತ ಸುಂದರವಾದ ಗೋಸಾಸದ (ತುರುಗೋಳ) ಕಲ್ಲನ್ನು ಕಾಣಬಹುದು.

ಮೇಲೆ ವಿವರಿಸಿದಂತೆ ಕಲ್ಯಾಣ ಚಾಲುಕ್ಯಾವಧಿಗೆ ಸೇರಿದ ಮೂರೂ ಶಾಸನಗಳು[೬೦] ಪ್ರಕಟಗೊಂಡಿವೆ. ಕಲ್ಯಾಣ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಕಾಲದ ಕ್ರಿ.ಶ.೧೧೨೨ರ ತೇದಿವುಳ್ಳ ಶಾಸನವು ಮಹಾಮಂಡಲೇಶ್ವರ ಆಚರಸನು ಕಿಸುಕಾಡು-೭೦, ನರೆಯಂಗಲ್ಲ-೧೨, ಬೆಳ್ವೊಲ-೩೦೦ ಆಳುತ್ತಿದ್ದಾಗ ಕಿರುನರೆಯಂಗಲ್ಲಿನ ಮಲ್ಲೇಶ್ವರ ದೇವಾಲಯದ ದೇವರಿಗೆ ೧೨ ಮತ್ತರು ಭೂಮಿಯನ್ನು ದಾನ ಮಾಡಿರುವ ಉಲ್ಲೇಖವಿದೆ. ಎರಡನೇ ಜಗದೇಕಮಲ್ಲನ ಕಾಲದ ಇನ್ನೊಂದು ಶಾಸನ ಕ್ರಿ.ಶ.೧೧೪೪ರ ತೇದಿಯುಳ್ಳದ್ದು. ಇದರಲ್ಲಿ ಮಾಲ್ಲೇಯ ಬ್ರಾಹ್ಮಣನು ಶ್ರೀ ಮೂಲಸ್ಥಾನ ಬ್ರಹ್ಮೇಶ್ವರ ದೇವರ ಅಂಗಭೋಗಕ್ಕೆ ಮತ್ತು ವಾಮಶಕ್ತಿ ಪಂಡಿತರಿಗೆ ಎಣ್ಣೆಗಾಣ ದಾನ ನೀಡಿದನು. ಅಲ್ಲದೇ ಕಿಸುಕಾಡು-೭೦ರ ತಂಬುಲಿಂಗರು, ಸಾಸಿರ್ವರು ಉಗುರ-೩೦೦ ಇತರ ದಾನವನ್ನು ನೀಡಿದರು. ನಾಲ್ಕನೆಯ ಸೋಮೇಶ್ವರನ

ಕಾಲದ ತ್ರುಟಿತ ಶಾಸನಮೊಂದಿದ್ದು, ಸಿಂದ ಮಾಂಡಳಿಕ ವೀರಬಿಜ್ಜಣದೇವನ ಉಲ್ಲೇಖ ನೀಡುತ್ತದೆ.

## ೩೭. ಕಲ್ಮೇಶ್ವರ ದೇವಾಲಯ

ನರೇಗಲ್ ಗ್ರಾಮದಲ್ಲಿರುವ ಕಲ್ಮೇಶ್ವರ ದೇವಾಲಯವನ್ನು[೬೧] ೧೨-೧೩ನೇ ಶತಮಾನದಲ್ಲಿ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ.

ಚೌಕಾಕಾರದ ತಲವಿನ್ಯಾಸವನ್ನು ಹೊಂದಿರುವ ದೇವಾಲಯೂ ತಿರ್ಯಙ್ಮುಖ ಕ್ರಮದಲ್ಲಿ ಗರ್ಭಗ್ರಹ, ಅಂತರಾಳ, ನವರಂಗ ಹಾಗೂ ಮುಖಮಂಟಪ ಭಾಗಗಳನ್ನು ಹೊಂದಿಡೆ. ಗರ್ಭಗೃಹದಲ್ಲಿ ಚೌಕಾಕಾರದ ಪೀಠವುಳ್ಳ ಶಿವಲಿಂಗವಿದ್ದು, ಭುವನೇಶ್ವರಿಯ ಕೆತ್ತನೆಯಿದೆ. ಅಂತರಾಳದಲ್ಲಿ ಪ್ರಾಚೀನ ನಂದಿ ಶಿಲ್ಪ ಹಾಗೂ ಗಣೇಶನ ವಿಗ್ರಹಗಳನ್ನು ಇಡಲಾಗಿದೆ. ಅಲ್ಲದೆ ಭುವನೇಶ್ವರಿಯ ಅಲಂಕರಣೆಯನ್ನು ಹೊಂದಿದೆ. ನವರಂಗವು ನಾಲ್ಕು ಕಂಬಗಳನ್ನು ಒಳಗೊಂಡಿದ್ದು ಅವುಗಳು ಬುಡದಲ್ಲಿ ಚೌಕಾಕಾರವಾಗಿದ್ದು, ಮಧ್ಯದಲ್ಲಿ ಗಂಟೆಯಾಕಾರದ ಕೆತ್ತನೆ ಹಾಗೂ ಮೇಲ್ಭಾಗದಲ್ಲಿ ಘಟ ಭಾಗವನ್ನು ಹೊಂದಿದ್ದು ಬೋದಿಗೆಯ ಜೋಡಣೆಯನ್ನು ಹೊಂದಿವೆ. ದೇವಾಲಯವನ್ನು ಆಧುನೀಕರಣಗೊಳಿಸಿದ್ದು ಮುಖಮಂಟಪದ ಇಕ್ಕೆಲಗಳಲ್ಲಿ ಕಟ್ಟೆಯನ್ನು ಕಟ್ಟಲಾಗಿದೆ. ಅಲ್ಲದೆ ಇಲ್ಲಿಯೂ ನಾಲ್ಕು ಕಂಬಗಳಿದ್ದು ಗಂಟೆಯಾಕಾರಾದ ಕೆತ್ತನೆಯನ್ನು ಹೊಂದಿದ್ದು ಮೇಲ್ಭಾಗದಲ್ಲಿ ತಟ್ಟೆಯಾಕಾರದ ಫಲಕಗಳು ಹಾಗೂ ಬೋದಿಗೆಯನ್ನು ಹೊಂದಿವೆ. ಅಲ್ಲದೆ ಇಲ್ಲಿ ಒಂದು ಶಾಸನ ಶಿಲ್ಪವನ್ನೂ ನಿಲ್ಲಿಸಲಾಗಿದೆ. ದೇವಾಲಯದ ಅಧಿಷ್ಠಾನವು ಸರಳವಾಗಿದ್ದು ಹೊರಭಿತ್ತಿಯು ಕೂಡ ಅಲಂಕಾರ ರಹಿತವಾಗಿದೆ. ಆದರೆ ಎಡಭಾಗದ ಭಿತ್ತಿಯಲ್ಲಿ ಸಪ್ತಮಾತೃಕೆಯ ಶಿಲ್ಪ ಹಾಗೂ ಅದರ ಮೇಲೆ ಒಂದು ಶಾಸನ ಶಿಲ್ಪ ಅಳವಡಿಸಲಾಗಿದೆ. ಗರ್ಭಗೃಹದ ಶಿಖರ ಭಾಗವು ಕದಂಬ-ನಾಗರ ಶೈಲಿಯಲ್ಲಿದ್ದು ಕಲಶ ಹಾಗೂ ಸ್ತೂಪಿಯ ಭಾಗವನ್ನು ಹೊಸದಾಗಿ ನಿರ್ಮಿಸಲಾಗಿದೆ. ದೇವಾಲಯದ ಹೊರವಲಯದಲ್ಲಿ ಅಥವಾ ಎಡ ಭಾಗದಲ್ಲಿ ಒಂದು ಸಣ್ಣ ಲಿಂಗ ಮಂಟಪವನ್ನು ನಿರ್ಮಿಸಲಾಗಿದೆ. ಇದರೊಳಗಿನ ಲಿಂಗವು ಚೌಕಾಕಾರದ ಪೀಠವನ್ನು ಹಾಗೂ ಎತ್ತರದ ರುದ್ರಭಾಗವನ್ನು ಹೊಂದಿದೆ. ಅಲ್ಲದೆ ದೇವಾಲಯದ ಆವರಣದಲ್ಲಿ ಭಗ್ನಗೊಂಡ ನಂದಿ ಶಿಲ್ಪಗಳು, ಸಪ್ತಮಾತೃಕೆಯರ ಶಿಲ್ಪ, ನಾಗಬಂಧದ ಶಿಲ್ಪ ಹಾಗೂ ಲಲಿತಾಸನದಲ್ಲಿ ಕುಳಿತ ಶಿವನ ಶಿಲ್ಪ ಇತ್ಯಾದಿಗಳನ್ನು ಕಾಣಬಹುದು. ದೇವಾಲಯವನ್ನು ಎತ್ತರದ ಕಟ್ಟೆಯ ಮೇಲೆ ನಿರ್ಮಿಸಿದ್ದು ಮೆಟ್ಟಿಲುಗಳ ಸಹಾಯದಿಂದ ದೇವಾಲಯವನ್ನು ಪ್ರವೇಶಿಸಬೇಕು.

ಕಲ್ಮೇಶ್ವರ ದೇವಾಲಯಕ್ಕೆ ಸಂಬಂಧಿಸಿದಂತೆ ಮೂರು ಶಾಸನಗಳು[೭೨] ಪ್ರಕಟವಾಗಿವೆ. ಯಾದವ ಕನ್ನಡ ಅರಸನ ಕಾಲದ ಒಂದು ಶಾಸನವು ಅತಿ ತ್ರುಟಿತವಾಗಿದ್ದು ಕಲಿದೇವರಿಗೆ ಭೂಮಿಯನ್ನು ದಾನ ಮಾಡಿರುವ ಉಲ್ಲೇಖವಿದೆ. ಇನ್ನೊಂದು ಶಾಸನದ ತೇದಿ ಹಾಗೂ ಯಾವ ವಂಶಾಡಳಿತಕ್ಕೆ ಸಂಬಂಧಪಟ್ಟದ್ದೆಂಬ ಸ್ಪಷ್ಟ ಮಾಹಿತಿ ಇಲ್ಲ. ಇದು ಸ್ಥಳೀಯ ಶ್ರೀಮಂತ ಗಾವುಂಡನಿಂದ ಮೂಲಸ್ಥಾನ ದೇವಾಲಯಕ್ಕಾಗಿ ನೀಲಕಂಠ ಪಂಡಿತರಿಗೆ ಭೂದಾನ ಮಾಡಿರುವ ಉಲ್ಲೇಖವನ್ನು ಒಳಗೊಂಡಿದೆ. ಈಗೀನ ಕಲ್ಮೇಶ್ವರ ದೇವಾಲಯವನ್ನು ಕಲಿ ದೇವರು ಹಾಗೂ ಮೂಲಸ್ಥಾನ ದೇವರೆಂದು ಶಾಸನದಲ್ಲಿ ಹೇಳಲಾಗಿದೆ. ಗ್ರಾಮದ ಹಿರೇಬಾವಿಯ ಹತ್ತಿರ ಸಿಕ್ಕಿರುವ ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ಶಾಸಲದಲ್ಲಿ ಮಾರಸಿಂಗಗಾವುಂಡನಿಂದ ಬಾವಿಯ ಮಠದ ಕಲಿದೇವರಿಗೆ ಭೂದಾನದ ಉಲ್ಲೇಖವನ್ನು ಒಳಗೊಂಡಿದೆ.

## ೩.೮. ತ್ರಿಪುರಾಂತಕ ದೇವಾಲಯ

ನರೇಗಲ್ ಗ್ರಾಮದಲ್ಲಿ ೧೨-೧೩ನೇ ಶತಮಾನದ ಹಾಗೂ ಕಲ್ಯಾಣ ಚಾಲುಕ್ಯ ಮಾದರಿಗೆ ಸೇರಿದ ಮತ್ತೊಂದು ದೇವಾಲಯವಿದೆ. ಅದೇ ತ್ರಿಪುರಾಂತಕ ದೇವಾಲಯ.[೭೩] ಪೂರ್ವಾಭಿಮುಖವಾದ ಈ ದೇವಾಲಯವು ಎತ್ತರದ ಕಟ್ಟೆಯ ಮೇಲೆ ಗರ್ಭಗೃಹ, ಅಂತರಾಳ, ನವರಂಗ ಭಾಗಗಳನ್ನು ಹೊಂದಿದೆ. ಗರ್ಭಗೃಹಕ್ಕೆ ಭುವನೇಶ್ವರಿಯಿದ್ದು ಚೌಕಾಕಾರದ ಪೀಠವುಳ್ಳ ಲಿಂಗವನ್ನು ಒಳಗೊಂಡಿದೆ. ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪ ವಿದೆ. ತೆರೆದ ಅಂತರಾಳದಲ್ಲಿ ನಂದಿ ವಿಗ್ರಹ ಹಾಗೂ ಪಾದದ ಶಿಲ್ಪವನ್ನು ಮತ್ತು ಭಿತ್ತಿಯಲ್ಲಿ ಒಂದು ಸಣ್ಣ ಕೊಷ್ಠದಲ್ಲಿ ಗಣೇಶನ ಶಿಲ್ಪವನ್ನು ಇಡಲಾಗಿದೆ. ನವರಂಗವು ನಾಲ್ಕು ವೃತ್ತಾಕಾರದ ಸಾದಾ ರಚನೆಯುಳ್ಳ ಕಂಬಗಳನ್ನು ಹಾಗೂ ಗೋಡೆಯ ಅರ್ಧಗಂಬಗಳನ್ನು ಒಳಗೊಂಡಿದೆ. ಅಲ್ಲದೆ ಭುವನೇಶ್ವರಿಯನ್ನು ಹೊಂದಿದ್ದು ಸಾದಾ ಬಾಗಿಲವಾಡಗಳಿವೆ. ದೇವಾಲಯದ ಒಳಗಿನ ಭಾಗದಲ್ಲೆಲ್ಲ ಬಣ್ಣ ಬಳಿಯಲಾಗಿದೆ. ನವರಂಗದಲ್ಲಿ ಒಂದು ಶಾಸನಶಿಲ್ಪವಿದೆ. ದೇವಾಲಯದ ಅಧಿಷ್ಠಾನ ಭಾಗವು ಉಪಾನ, ಜಗತಿ, ಕಂಪ ಹಾಗೂ ಕಪೋತ ಭಾಗಗಳನ್ನು ಒಳಗೊಂಡಿದೆ. ಹಾಗೂ ಹೊರ ಭಿತ್ತಿಯಲ್ಲಿ ಕೂಡ್ಯ ಸ್ತಂಭಗಳಿದ್ದು ಅವುಗಳ ಮಧ್ಯೆ ಕೋಷ್ಠಗಳನ್ನು ನಿರ್ಮಿಸಲಾಗಿದೆ. ಆದರೆ ಅವು ಬರಿದಾಗಿವೆ. ಗರ್ಭಗೃಹದ ಶಿಖರ ಭಾಗವು ಮೂರು ತಲಗಳನ್ನು ಹೊಂದಿದ್ದು ದ್ರಾವಿಡ ಮಾದರಿಯಾಗಿದೆ. ದೇವಾಲಯದ ಹೊರಭಾಗದಲ್ಲಿ ಭಗ್ನಗೊಂಡಿರುವ ಕೆಲವು ಪೀಠಭಾಗಗಳು, ಬಿಡಿಶಿಲ್ಪಗಳು ಹಾಗೂ ವೀರಗಲ್ಲು ಶಾಸನಮೊಂದಿದೆ.

ತ್ರಿಪುರಾಂತಕ ದೇವಾಲಯದಲ್ಲಿರುವ ಎರಡು ಶಾಸನಗಳು[೬೪] ಪ್ರಕಟವಾಗಿವೆ. ಕಲ್ಯಾಣ ಚಾಲುಕ್ಯ ಎರಡನೆ ಜಯಸಿಂಹನ ಶಾಸನವು ತಿಪ್ಪಣ್ಣಯ್ಯ ನಾಯಕನಿಂದ ನೆರೆಯಂಗಲ್ಲದ ತಿಪ್ಪಣೇಶ್ವರ ದೇವಾಲಯಕ್ಕಾಗಿ ತ್ರಿಲೋಚನ ಪಂಡಿತ ದೇವರಿಗೆ ಭೂಮಿಯನ್ನು ದಾನ ಮಾಡಿರುವ ಉಲ್ಲೇಖವನ್ನು ನೀಡುತ್ತದೆ. ಮತ್ತೊಂದು ಶಾಸನ ಕ್ರಿ.ಶ.೧೧೯೭ರ ತೇದಿಯುಳ್ಳದ್ದಾಗಿದ್ದು, ಹೊಯ್ಸಳ ಅರಸ ಎರಡನೆ ವೀರಬಲ್ಲಾಳನ ಕಾಲಕ್ಕೆ ಸೇರಿದುದಾಗಿದೆ. ಹಂಪನಾಯಕನ ವೀರ ಮರಣ ಹೊಂದಿರುವ ಉಲ್ಲೇಖವನ್ನು ತಿಳಿಸುತ್ತದೆ. ಶಾಸನವು ತ್ರುಟಿತವಾಗಿದ್ದರಿಂದ ಹೆಚ್ಚಿ ಮಾಹಿತಿ ನೀಡುವುದಿಲ್ಲ

## ೩೯. ಈಶ್ವರ ದೇವಾಲಯ

ಬೆಣಸಮಟ್ಟಿ ಗ್ರಾಮದ ದಂಡೆಯ ಮೇಲಿರುವ ಈಶ್ವರ ದೇವಾಲಯವು[೬೫] ವಿಜಯನಗರೋತ್ತರ ಶೈಲಿಯದಾಗಿದ್ದು ೧೨-೧೩ನೇ ಶತಮಾನಕ್ಕೆ ಸೇರಿದುದಾಗಿದೆ. ಉತ್ತಾರಾಭಿಮುಖವಾದ ದೇವಾಲಯ ಚೌಕಾಕಾರದ ತಲವಿನ್ಯಾಸದಲ್ಲಿ ನಿರ್ಮಿಸಲಾಗಿದ್ದೆ. ಪ್ರಸ್ತುತದಲ್ಲಿ ಈ ದೇವಾಲಯದ ಗರ್ಭಗೃಹ ಮಾತ್ರ ಉಳಿದಿದ್ದು ಉಳಿದ ಎಲ್ಲ ಭಾಗಗಳು ಬಿದ್ದು ಹೋಗಿವೆ. ಗರ್ಭಗೃಹದಲ್ಲಿ ಚೌಕಾಕಾರದ ಪೀಠವನ್ನು ಹೊಂದಿದ ಲಿಂಗವಿದೆ. ಅಲ್ಲದೆ ಸುಂದರ ಕೆತ್ತನೆಯ ಭುವನೇಶ್ವರಿಯನ್ನು ಹೊಂದಿದೆ. ಸರಳವಾದ ಅಧಿಷ್ಠಾನ ಹಾಗೂ ಭಿತ್ತಿಯನ್ನು ಒಳಗೊಂಡಿದ್ದು ಇದು ತಲಗಳನ್ನು ಹೊಂದಿದ ದ್ರಾವಿಡ ಮಾದರಿಯ ಶಿಖರವನ್ನು ಕಾಣಬಹುದಾಗಿದೆ. ದೇವಾಲಯದ ಆವರಣದಲ್ಲಿ ಅಪ್ರಕಟಿತ ಶಾಸನ ಶಿಲ್ಪವೊಂದನ್ನು ನಿಲ್ಲಿಸಲಾಗಿದೆ.

## ೪೦. ನಗರೇಶ್ವರ ದೇವಾಲಯ

ಸೂಡಿ ಗ್ರಾಮದ ಹುಡೇದ ಗಡ್ಡಿ ಓಣಿಯಲ್ಲಿ ನಗರೇಶ್ವರ ದೇವಾಲಯವಿದೆ.[೬೬] ಇದನ್ನು ೧೨-೧೩ನೇ ಶತಮಾನದಲ್ಲಿ ಕಲ್ಯಾಣಚಾಲುಕ್ಯ ಶೈಲಿಯಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ. ಈ ದೇವಾಲಯವು ಚೌಕಾಕಾರದ ತಲವಿನ್ಯಾಸವನ್ನೊಳಗೊಂಡಿದ್ದು, ತಿರ್ಯಙ್ಮುಖ ಕ್ರಮದಲ್ಲಿ ಈ ಗರ್ಭಗೃಹ, ಅಂತರಾಳ ಹಾಗೂ ನವರಂಗ ಭಾಗಗಳನ್ನು ಕಾಣಬಹುದು. ಗರ್ಭಗೃಹದಲ್ಲಿ ನಕ್ಷತ್ರಾಕಾರ ಪೀಠವುಳ್ಳ ಲಿಂಗ ಹಾಗೂ ಬಲ ಮೂಲೆಯಲ್ಲಿ ಗಣೇಶನ ಶಿಲ್ಪಿವಿಡಲಾಗಿದೆ. ಬಾಗಿಲವಾಡವು ತ್ರಿಪಟ್ಟಿಕೆಗಳಿಂದ ಕೂಡಿದ್ದು ಮೇಲ್ಫಾವಣಿಯವರೆಗೆ ವಿಸ್ತರಿಸಿವೆ. ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪ ಗರ್ಭಗೃಹಕ್ಕೆ ಅಂತರಾಳವಿದ್ದು ಅಲ್ಲಿ ನಂದಿ ವಿಗ್ರಹವನ್ನಿಡಲಾಗಿದೆ. ಅಂತರಾಳದ ಬಾಗಿಲವಾಡದ ಲಲಾಟದಲ್ಲಿ ಅಸ್ಪಷ್ಟ ಶಿಲಾ ಫಲಕವನ್ನು ಅಳವಡಿಸಿದ್ದಾರೆ.

ಇಕ್ಕೆಲಗಳಲ್ಲಿ ಜಾಲಾಂಧ್ರಗಳ ರಚನೆಯಿದೆ. ನವರಂಗದಲ್ಲಿನ ನಾಲ್ಕು ಕಂಬಗಳು ಸುಂದರ ಕೆತ್ತನೆಗಳನ್ನು ಹೊಂದಿವೆ. ಕಂಬದ ಕೆಳಭಾಗದಲ್ಲಿ ನಾಲ್ಕು ಮೂಲೆಗಳಲ್ಲಿ ಅರ್ಧಗಂಬದಲ್ಲಿ ಶಿಖರ ರಚನೆ ಹಾಗೂ ವಿವಿಧ ಭಂಗಿಯ ಸ್ತ್ರೀ ಶಿಲ್ಪಗಳ ಕೆತ್ತನೆಯಿದೆ. ಈ ಕಂಬಗಳ ಮೇಲೆ ಹೊಸ ಕಂಬಗಳನ್ನು ಜೋಡಿಸಿ ಮೇಲ್ಛಾವಣಿಯನ್ನು ಹೊಸದಾಗಿ ನಿರ್ಮಿಸಿದ್ದಾರೆ. ಎಡ ಕಂಬದಲ್ಲಿ ಶಾಸನ ಲಿಪಿಯನ್ನು ಕಾಣಬಹುದು.

ಈ ದೇವಾಲಯಕ್ಕೆ ಸಂಬಂಧಿಸಿದಂತೆ ಶಾಸನವೊಂದು[೬೭] ಪ್ರಕಟವಾಗಿದೆ. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ಕಾಲದ ಕ್ರಿ.ಶ.೧೧೧೩ರ ತೇದಿವುಳ್ಳ ಶಾಸನ ಗ್ರಾಮಗ ಚಾವಡಿಯ ಮುಂಭಾಗದಲ್ಲಿದೆ. ಮಹಾಸಾಮಂತ ದಡಿಗನಿಂದ ಸೂಡಿಯ ನಗರೇಶ್ವರ ದೇವಾಲಯಕ್ಕೆ ಭೂಮಿಯನ್ನು ದಾನ ಕೊಟ್ಟಿರುವ ಉಲ್ಲೇಖವಿದೆ. ಗ್ರಾಮದಲ್ಲಿ ಬಸವೇಶ್ವರ ದೇವಾಲಯದ ಮುಂಭಾಗದಲ್ಲಿ ಎರಡು ಶಾಸನಗಳಿದ್ದು ಅವು ಪ್ರಕಟಗೊಂಡಿವೆ. ಕಲ್ಯಾಣ ಚಾಲುಕ್ಯ ಆರನೇಯ ವಿಕ್ರಮಾದಿತ್ಯನ ಕಾಲದ ಶಾಸನಗಳು, ದಂಡನಾಯಕ ಶ್ರೀವಲ್ಲಭನಿಂದ ಸೋಮೇಶ್ವರ ಪಂಡಿತನ ಮಗನಿಗೆ ಮುದಿಯನೂರು ಗ್ರಾಮವನ್ನು ದಾನ ಮಾಡಿರುವ ಉಲ್ಲೇಖ ಒಂದು ಶಾಸನದಲ್ಲಿದ್ದರೆ, ಇನ್ನೊಂದು ಶಾಸನದಲ್ಲಿ ವಿಕ್ರಮನ ಪಿರಿಯರಸಿ ಲಕ್ಷ್ಮಾದೇವಿಯರಿಂದ ಸೂಂಡಿಯ ಅಚಲೇಶ್ವರದ ಸೋಮೇಶ್ವರ ಪಂಡಿತ ದೇವರಿಗೆ ಪೊಂಗಲಿ ಗ್ರಾಮದಾನದ ಉಲ್ಲೇಖವಿದೆ.

## ೪೧. ನೆಲೆಮನೆ ದೇವಾಲಯ ಅಥವಾ ಕಲ್ಮೇಶ್ವರ ದೇವಾಲಯ

ಸೂಡಿ ಗ್ರಾಮದಲ್ಲಿ ೧೨-೧೩ನೇ ಶತಮಾನದ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾದ ಮತ್ತೊಂದು ದೇವಾಲಯ ಈ ನೆಲೆಮನೆ ದೇವಾಲಯ.[೬೮] ಆಯತಾಕಾರದ ತಲವಿನ್ಯಾಸವುಳ್ಳ ಈ ದೇವಾಲಯವು ಗರ್ಭಗೃಹ, ಆಯತಾಕಾರದ ಮಂಟಪದ ಭಾಗಗಳನ್ನು ಹೊಂದಿದೆ. ಮಂಟಪದ ಮೂಲಕವೇ ಪ್ರವೇಶ ಕಲ್ಪಿಸಲಾಗಿದೆ. ಆದರೆ ಇಂದು ಅದು ಮಣ್ಣಿನಲ್ಲಿ ಹುದುಗಿಹೋಗಿದೆ. ಗರ್ಭಗೃಹದ ಬಾಗಿಲವಾಡದ ಲಲಾಟದಲ್ಲಿ ಗಜಲಕ್ಷ್ಮೀಯ ಉಬ್ಬುಶಿಲ್ಪವಿದೆ. ಇಲ್ಲಿರುವ ಸರಳ ಬೋಧಿಗೆಯನ್ನು ಹೊಂದಿರುವ ಕಂಬಗಳು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಿತವಾಗಿದವುಗಳೆಂದು ಸುಲಭವಾಗಿ ಗುರುತಿಸಬಹುದು.

ಈ ದೇವಾಲಯವೊಂದು ಟಂಕಶಾಲೆ ಆಗಿತ್ತು ಎಂದು ತಿಳಿಯಲಾಗಿದೆ. ಸೂಡಿ ಪಟ್ಟಣವು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಬ್ರಹ್ಮಪುರಿ ಹಾಗೂ ಅಗ್ರಹಾರವಾಗಿತ್ತು. ಅಲ್ಲಗೆ

ಆಡಳಿತದ ಉಪವಿಭಾಗವಾಗಿತ್ತು. ಆದ್ದರಿಂದ ನಾಣ್ಯಗಳನ್ನು ಟಂಕಿಸುವ ಕಾರ್ಯ ಇಲ್ಲಿ ನಡೆದಿರಬಹುದು ಎಂದು ಊಹಿಸಲಾಗಿದೆ. ಈ ದೇವಾಲಯದ ಉಲ್ಲೇಖವಿರುವ ಶಾಸನವೊಂದು[೬೯] ಪ್ರಕಟವಾಗಿದೆ. ಕಲ್ಯಾಣ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಕಾಲದ ಕ್ರಿ.ಶ.೧೧೦೩ರ ತೇದಿವುಳ್ಳ ಶಾಸನವು ಒತ್ತಜ ಸೂಂಡಿಯ ಕಲ್ಮೇಶ್ವರ ದೇವಾಲಯದ ನಂದಾದೀವಿಗೆಗಾಗಿ ನೀಡಿದ ಸುವರ್ಣದಾನ ಉಲ್ಲೇಖವನ್ನು ಹೊಂದಿದೆ.

## ೪೨. ಅಬ್ಬಿಗೇರಿಯ ಈಶ್ವರ ದೇವಾಲಯ

ಶಾಸನಗಳಲ್ಲಿ 'ಅವ್ವಗೇರಿ', 'ಅಬ್ಬಿಯಗೇರಿ' ಎಂದು ಕರೆಸಿಕೊಂಡ ಇಂದಿನ ಅಬ್ಬಿಗೇರಿಯ ಪ್ರಾಚೀನ ಈಶ್ವರ ದೇವಾಲಯವು[೭೦] ಗ್ರಾಮದ ಕೆರೆಯದಂಡೆ ಹಾಗೂ ಬಸ್ ನಿಲ್ದಾಣದ ಹತ್ತಿರದಲ್ಲಿದೆ. ಕ್ರಿ.ಶ.೧೧-೧೨ನೇ ಶತಮಾನಕ್ಕೆ ಸೇರಿದ ಈ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ನಿರ್ಮಿತವಾಗಿದ್ದು, ದಕ್ಷಿಣಾಭಿಮುಖವಾಗಿದೆ. ಭಾಗಶಃ ನವೀಕರಣಗೊಂಡ ದೇವಾಲಯವು ಚೌಕಾಕಾರದ ತಲವಿನ್ಯಾಸ ಹೊಂದಿದ್ದು ಗರ್ಭಗೃಹ, ಅಂತರಾಳ ಹಾಗೂ ಮಂಟಪ ಭಾಗಗಳನ್ನು ಒಳಗೊಂಡಿದೆ. ಪ್ರಾಚೀನ ಗರ್ಭಗೃಹವನ್ನು ಹಾಗೆಯೇ ಉಳಿಸಿಕೊಂಡು ಉಳಿದ ಅಂಗಗಳನ್ನು ದುರಸ್ತಿಗೊಳಿಸಲಾಗಿದೆ. ಗರ್ಭಗೃಹದಲ್ಲಿ ವೃತ್ತಾಕಾರದ ಪ್ರಾಚೀನ ಲಿಂಗವಿದ್ದು, ಬಾಗಿಲವಾಡವು ಐದು ಪಟ್ಟಿಕೆಗಳ ಕೆತ್ತನೆಯಿಂದ ಕೂಡಿದೆ. ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ದೇವಾಲಯಕ್ಕೆ ಅಂತರಾಳವಿದ್ದು, ಅಲಂಕೃತ ನಂದಿ ವಿಗ್ರಹವನ್ನು ಹೊಂದಿದೆ.

ನವೀಕರಿಸಲಾದ ತೆರದ ಮಂಟಪ ದೇವಾಲಯಕ್ಕಿದ್ದು ಪೂರ್ವಾಭಿಮುಖವಾದ ಎರಡು ಗೂಡುಗಳನ್ನು ಒಳಗೊಂಡಿದೆ. ಒಂದು ಗೂಡು ಗಣೇಶನ ಶಿಲ್ಪವನ್ನು ಹೊಂದಿದ್ದರೆ ಮತ್ತೊಂದು ಬರಿದಾಗಿದೆ. ಅಧಿಷ್ಠಾನವು ಸರಳ ರಚನೆಯಿಂದ ಕೂಡಿದ್ದು, ಹೊರಭಿತ್ತಿಯು ದೇವಕೋಷ್ಟಕಗಳನ್ನು ಒಳಗೊಂಡಿದೆ. ಪ್ರತಿ ಕೋಷ್ಠಗಳು ಬೇರೆ ಬೇರೆ ದೇವ ಶಿಲ್ಪಗಳನ್ನು ಹೊಂದಿವೆ. ಶಿಖರವು ಕದಂಬ-ನಾಗರ ಮಾದರಿಯದಾಗಿದ್ದು, ದೊಡ್ಡ ಶಿಲಾ ಅಮಲಕವನ್ನು ಒಳಗೊಂಡಿರುವುದು ಇದರ ವೈಶಿಷ್ಟ್ಯ.

ದೇವಾಲಯದ ಎರಡು ಕಂಬಗಳಲ್ಲಿ ಶಾಸನಗಳಿದ್ದು[೭೧] ಅವು ಪ್ರಕಟಗೊಂಡಿವೆ. ಎರಡೂ ಶಾಸನಗಳು ಕಲ್ಯಾಣ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಿಸಿದ್ದು ಅವು ಕ್ರಮವಾಗಿ ಕ್ರಿ.ಶ.೧೧೧೩ ಹಾಗೂ ೧೧೧೨ರ ತೇದಿಯನ್ನು ಒಳಗೊಂಡಿವೆ. ಈ ಎರಡೂ ಶಾಸನಗಳೂ ಭಾಗಶಃ ತ್ರುಟಿತಗೊಂಡಿದ್ದು, ದಾನ ನೀಡಿದ ಉಲ್ಲೇಖವನ್ನು

ಪ್ರಸ್ತಾಪಿಸುತ್ತವೆ.

## ೪೩. ಜ್ಯೋತಿರ್ಲಿಂಗನ ದೇವಾಲಯ

ಅಬ್ಬಿಗೇರಿಯ ಜ್ಯೋತಿರ್ಲಿಂಗ ದೇವಾಲಯವು[೨] ಗ್ರಾಮದ ಉತ್ತರ ಅಥವಾ ಎಲಿಬೇಲೇರಿ ಗ್ರಾಮಕ್ಕೆ ಹೋಗುವ ರಸ್ತೆಯ ಬಳಿ ಇದೆ: ಕ್ರಿ.ಶ.೧೬-೧೭ನೇ ಶತಮಾನಕ್ಕೆ ಸೇರಿದ ಈ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಯದಾಗಿದ್ದು ದಕ್ಷಿಣಾಭಿಮುಖವಾಗಿದೆ. ತಕ್ಕಮಟ್ಟಿಗೆ ದೇವಾಲಯವು ಪ್ರಾಚೀನವಾಗಿದೆ. ಇದು ಚೌಕಾಕಾರದ ತಲವಿನ್ಯಾಸವನ್ನು ಹೊಂದಿದ್ದು ತಿರ್ಯಙ್ಮುಖ ಕ್ರಮದಲ್ಲಿ ಗರ್ಭಗೃಹ, ತೆರೆದ ಅಂತರಾಳ ಹಾಗೂ ನವರಂಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಚೌಕಾಕಾರದ ಪೀಠದ ಮೇಲೆ ವೃತ್ತಾತಾರದ ಲಿಂಗವಿದ್ದು ತೆರೆದ ಅಂತರಾಳ ಭಾಗದಲ್ಲಿ ನಂದಿ ವಿಗ್ರಹವನ್ನಿಡಲಾಗಿದೆ. ನವರಂಗದಲ್ಲಿ ಗಿಡ್ಡನೆಯ ಸರಳ ರಚನೆಯ ನಾಲ್ಕು ಕಂಬಗಳಿದ್ದು, ಬೋದಿಗೆಯ ಜೋಡಣೆಗಳನ್ನು ಹೊಂದಿವೆ. ಹಾಗು ಅವುಗಳನ್ನೊಳಗೊಂಡಂತೆ ಎತ್ತರದ ಕಟ್ಟೆಯನ್ನು ನಿರ್ಮಿಸಲಾಗಿದೆ. ನವರಂಗದಲ್ಲಿ ಗೂಡುಗಳಿದ್ದು ಅವುಗಳಲ್ಲ ಪೀಠವಿಲ್ಲದ ಲಿಂಗದ ರುಧ್ರ ಭಾಗಗಳನ್ನಿಡಲಾಗಿದೆಯಲ್ಲದೆ ಜಾಲಾಂಧ್ರಗಳನ್ನು ಸಹ ಅಳವಡಿಸಲಾಗಿದೆ. ಆದರೆ ಇಂದು ಅಲ್ಲಿನ ಗ್ರಾಮಸ್ಥರು ಈ ದೇವಾಲಯವನ್ನು ತಮ್ಮ ಕೃಷಿ ಬೆಳೆಗಳನ್ನು ಸಂಗ್ರಹಿಸಿಡುವ ಕೋಣೆಯನ್ನಾಗಿ ಮಾಡಿಕೊಂಡಿದ್ದಾರೆ. ದೇವಾಲಯದ ಅಧಿಷ್ಠಾನ ಭಾಗವು ಸಂಪೂರ್ಣವಾಗಿ ಮಣ್ಣಿನಲ್ಲಿ ಮುಟ್ಟಿಹೋಗಿದ್ದು ಹೊರಭಿತ್ತಿಯನ್ನು ದುರಸ್ತಿಗೊಳಿಸಲಾಗಿದೆ. ಶಿಖರ ಭಾಗವು ಸಂಪೂರ್ಣವಾಗಿ ನಾಶವಾಗಿದೆ.

ಈ ದೇವಾಲಯದ ಆವರಣದಲ್ಲಿ ಬಾವಿಯೊಂದಿದೆ. ಬಾವಿಯ ಸಮೀಪದಲ್ಲಿ ಅತಿ ತೃಟಿತ ಶಾಸನವೊಂದಿದ್ದು[೩] ಬಾವಿಯ ನಿರ್ವಹಣೆಗಾಗಿ ಭೂಮಿಯನ್ನು ದಾನ ಮಾಡಿರುವ ಉಲ್ಲೇಖವನ್ನು ಹೊಂದಿದೆ.

ಮೇಲಿನ ಶಾಸನವಲ್ಲದೆ[೪] ಇನ್ನೂ ಎಂಟು ಶಾಸನಗಳು ಈ ಗ್ರಾಮದಲ್ಲಿ ದೊರಕಿವೆ. ಗ್ರಾಮದ ಚಾವಡಿ ಹತ್ತಿರ ಇರುವ ಕ್ರಿ.ಶ.೧೧೧೩ರ ತೇದಿವುಳ್ಳ ಕಲ್ಯಾಣಚಾಲುಕ್ಯ ಅರನೆ ವಿಕ್ರಮಾದಿತ್ಯನ ಶಾಸನವು ಮಹಾಮಂಡಲೇಶ್ವರ ಅಚರಸದಿಂದ ದೇವಿಂಗೆರೆಗೆ ಭೂಮಿಯನ್ನು ದಾನ ನೀಡಿರುವ ಮಾಹಿತಿಯನ್ನು ವಿವರಿಸುತ್ತದೆ. ಇಲ್ಲಿರುವ ಇನ್ನೊಂದು ಶಾಸನವು ಕಲಚೂರಿ ಸೋವಿದೇವನ ಕಾಲಕ್ಕೆ ಸಂಬಂಧಿಸಿವೆ. ಕ್ರಿ.ಶ.೧೧೭೪ರ ತೇದಿವುಳ್ಳ ಈ ಶಾಸನವು ಮಾಂಡಳಿಕ ಸಿಂದಬಮ್ಮರಸನು ಕುಪ್ಪೇಶ್ವರ ದೇವರಿಗೆ ಭೂದಾನ ಮಾಡಿ ಪುಣ್ಯಪ್ರಾಪ್ತಿ ಪಡೆದುಕೊಂಡಿರುವ ಉಲ್ಲೇಖ ಹೊಂದಿದೆ. ಇದೇ ಕಲ್ಲಿನಲ್ಲಿ ದಾನ ಕಾರ್ಯದ ಇನ್ನೂ ಕೆಲವು ವಿವರಣೆಗಳೀವೆ. ಕ್ರಿ.ಶ.೧೧೮೭ರ ತೇದಿವುಳ್ಳ ಶಾಸನದಲ್ಲಿ ಕಲ್ಯಾಣ ಚಾಲುಕ್ಯ ನಾಲ್ಕನೆಯ

ಸೋಮೇಶ್ವರನು ಕುಪ್ಪೇಶ್ವರ ದೇವರಿಗೆ ಭೂಮಿಯನ್ನು ದಾನ ಮಾಡಿರುವ ಉಲ್ಲೇಖವಿದೆ.

ಕ್ರಿ.ಶ. ೧೧೨೫ರ ಶಾಸನವು ಆರನೆಯ ವಿಕ್ರಮಾದಿತ್ಯನಿಗೆ ಸಂಬಂಧಿಸಿದ್ದು ಮಹಾಜನರು ಅಬ್ಬೆಯಗೆರೆಯ ಸೋಮೇಶ್ವರ ದೇವರಿಗೆ ಭೂಮಿಯನ್ನು ದಾನವಾಗಿ ನೀಡಿರುವ ಉಲ್ಲೇಖವನ್ನು ಹೊಂದಿದೆ. ಸಿಂದ ಬಿಜ್ಜಳನಿಗೆ ಸೇರಿದ ಕ್ರಿ.ಶ.೧೨ನೇ ಶತಮಾನದ ಶಾಸನದಲ್ಲಿ ಬಿಜ್ಜಣ ಹಾಗೂ ವಿಕ್ರಮರಿಂದ ಮೂಲಸ್ಥಾನ ದೇವರಿಗೆ ಭೂಮಿಯನ್ನು ದಾನ ನೀಡಿರುವ ಮಾಹಿತಿ ಇದೆ. ವಿಜಯನಗರ ಕಾಲಕ್ಕೆ ಸಂಬಂಧಿಸಿದ ಎರಡು ಶಾಸನಗಳು ದೊರಕಿವೆ. ೧೩೭೯ರ ತೇದಿವುಳ್ಳ ಎರಡನೆ ಹರಿಹರನ ಕಾಲದ ಶಾಸನವು ಯರಿಗೇರಿಯ ಹೇಮಾದ್ರಿ ಆಚಾರ್ಯನಿಗೆ ಅರಸನು ಗ್ರಾಮದಾನ ಮಾಡಿರುವ ಉಲ್ಲೇಖವನ್ನು ಹೊಂದಿದೆ. ಕ್ರಿ.ಶ. ೧೫೪೧ರ ತೇದಿವುಳ್ಳ ಅಚ್ಯುತರಾಯನ ಕಾಲದ ಶಾಸನವು ಹೊನ್ನಾಪುರದ ಯುದ್ಧದಲ್ಲಿ ತಿಮ್ಮಣನು ವೀರಮರಣ ಹೊಂದಿರುವ ವಿಷಯವನ್ನು ತಿಳಿಸುತ್ತದೆ. ವಿಜಯನಗರೋತ್ತರದ ಶಾಸನವೊಂದಿದ್ದು ಇದು ಸ್ಥಳೀಯ ನಾಯಕನೊಬ್ಬ ಭೂದಾನ ಮಾಡಿರುವ ಉಲ್ಲೇಖವನ್ನು ಹೊಂದಿದೆ.

## ೪೪. ಶಾಂತೇಶ್ವರ ದೇವಾಲಯ

ಶಾಂತಗಿರಿ ಗ್ರಾಮದಿಂದ ಸುಮಾರು ೪ ಕಿ.ಮೀ. ದೂರದಲ್ಲಿ ಬೆಟ್ಟದ ಮೇಲಿರುವ ಶಾಂತೇಶ್ವರ ದೇವಾಲಯವು[೫೫] ೧೭-೧೮ನೇ ಶತಮಾನಕ್ಕೆ ಸೇರಿದ ದೇವಾಲಯವಾಗಿದೆ. ಇದನ್ನು ವಿಜಯನಗರೋತ್ತರ ಶೈಲಿಯಲ್ಲಿ ನಿರ್ಮಿಸಲಾಗಿದ್ದು, ಪೂರ್ವಾಭಿಮುಖವನ್ನು ಹೊಂದಿದೆ.

ಚೌಕಾಕಾರದ ತಲವಿನ್ಯಾಸದಲ್ಲಿ ರಚಿತವಾದ ದೇವಾಲಯ ಗರ್ಭಗೃಹ ಹಾಗೂ ಮಂಟಪದ ಭಾಗಗಳನ್ನು ಒಳಗೊಂಡಿದೆ. ಅಲ್ಲದೇ ಇದನ್ನು ಆಧುನೀಕರಣಗೊಳಿಸಲಾಗಿದೆ. ಗರ್ಭಗೃಹದಲ್ಲಿ ಭುವನೇಶ್ವರಿಯ ಅಲಂಕರಣೆಯಿದ್ದು ಚೌಕಾಕಾರದ ಪೀಠದ ಮೇಲೆ ವೃತ್ತಾತಾರದ ಲಿಂಗವಿದೆ. ಗರ್ಭಗೃಹದ ಮುಂಭಾಗದಲ್ಲಿ ಎರಡು ತ್ರುಟಿತಗೊಂಡ ನಂದಿ ವಿಗ್ರಹಗಳನ್ನಿಡಲಾಗಿದೆ. ಮಂಟಪದಲ್ಲಿರುವ ಕಂಬಗಳು ಚೌಕಾಕಾರದವಾಗಿದ್ದು ಬೋದಿಗೆಗಳನ್ನು ಹೊಂದಿವೆ. ಬಾಗಿಲವಾಲಡವು ಸರಳ ಪಟ್ಟಿಕೆಗಳಿಂದ ಕೂಡಿದ್ದು ಲಲಾಟದಲ್ಲಿ ಗಣೇಶನ ಉಬ್ಬುಶಿಲ್ಪವಿದೆ. ಶಿಖರ ಭಾಗವು ಕದಂಬ ನಾಗರ ಶೈಲಿಯಲ್ಲಿದೆ. ದೇವಾಲಯದ ಸಮುಚ್ಛಯದಲ್ಲಿ ಇನ್ನೂ ಹಲವು ಚಿಕ್ಕ ಚಿಕ್ಕ ದೇವಾಲಯಗಳಿವೆ. ಈ ದೇವಾಲಯಗಳಲ್ಲಿ ಕೆಲವು ಲಿಂಗಪೀಠದ ಮೇಲೆ ಬೇರೆ ಬೇರೆ ಸ್ತ್ರೀದೇವತೆಯ ಶಿಲ್ಪವನ್ನು ಪೂಜಿಸಲಾಗುತ್ತಿದೆ.

ಇನ್ನೂ ಕೆಲವು ದೇವಾಲಯಗಳು ವೃತ್ತಾಕಾರ ಹಾಗೂ ಚೌಕಾಕಾರದ ಪೀಠವುಳ್ಳ ಲಿಂಗಗಳನ್ನು ಒಳಗೊಂಡಿವೆ. ದೇವಾಲಯದ ಪ್ರವೇಶದ್ವಾರದ ಒಳ ಭಾಗದಲ್ಲಿ ಎಡ-ಬಲ ಹಲವು ಸಾಲು ಕಂಬಗಳನ್ನೊಳಗೊಂಡ ಮಂಟಪಗಳಿವೆ. ದೇವಾಲಯದ ಮುಂಭಾಗದಲ್ಲಿ ಹೊಂಡದಲ್ಲಿಯೇ ಕೆಲವು ಲಿಂಗಗಳನ್ನೊಳಗೊಂಡ ಚಿಕ್ಕ ಚಿಕ್ಕ ದೇವಾಲಯಗಳಿವೆ. ಈ ಹೊಂಡದ ನೀರು ದೇವಾಲಯದ ಬಲಭಾಗದಲ್ಲಿ ಉದ್ಭವಗೊಂಡಿದ್ದು ಸಣ್ಣದಾಗಿ ಹರಿದು ಮುಂಭಾಗದಲ್ಲಿ ಹೊಂಡ ನಿರ್ಮಾಣವಾಗಿದೆ. ಇದನ್ನು ಕಾಶಿ ಹೊಂಡ ಎಂದು ಸ್ಥಳೀಯರು ಕರೆಯುತ್ತಾರೆ. ದೇವಾಲಯದ ಆವರಣದಲ್ಲಿ ಕೆಲವು ನಾಗಶಿಲ್ಪಗಳನ್ನು ಇರಿಸಲಾಗಿದೆ. ಸುಮಾರು ಎರಡುನೂರು ಅಡಿ ಉತ್ತರ ಬೆಟ್ಟದ ಮೇಲೆ ನಿರ್ಮಾಣಗೊಂಡ ದೇವಾಲಯವು ಸೊಗಸಾದ ಪ್ರಕೃತಿ ಸೌಂದರ್ಯದಿಂದ ಮನಮೋಹಕವಾಗಿ ಕಂಡುಬರುತ್ತದೆ.

## ೪೫. ಕಲ್ಮೇಶ್ವರ ದೇವಾಲಯ

ಜಕ್ಕಲಿಯಲ್ಲಿರುವ ಕಲ್ಮೇಶ್ವರ ದೇವಾಲಯವು[೬೭] ವಿಜಯನಗರೋತ್ತರ ಶೈಲಿಯದ್ದಾಗಿದ್ದು ೧೮-೧೯ನೇ ಶತಮಾನಕ್ಕೆ ಸೇರಿದುದಾಗಿದೆ. ಚಚ್ಚೌಕ ತಲವಿನ್ಯಾಸವನ್ನು ಹೊಂದಿದ ದೇವಾಲಯವು ಪೂರ್ವಾಭಿಮುಖವಾಗಿದ್ದು ಇಂದು ಸಂಪೂರ್ಣವಾಗಿ ನವೀಕರಣಗೊಂಡಿದೆ. ಪ್ರಸ್ತುತ ದೇವಾಲಯವು ಗರ್ಭಗೃಹ ಹಾಗೂ ಮಂಟಪಭಾಗವನ್ನು ಹೊಂದಿರುವುದು. ಗರ್ಭಗೃಹ ದೇವಾಲಯದ ಹೊರ ಆವರಣದಲ್ಲಿ ವೀರಗಲ್ಲು, ಶಾಸನಶಿಲ್ಪ ಮತ್ತು ಅತಿ ತ್ರುಟಿತಗೊಂಡ ಇನ್ನೊಂದು ಶಾಸನಶಿಲ್ಪವಿದೆ. ಇವು ಸದ್ಯ ದೇವಾಲಯದಲ್ಲಿ ಉಳಿದಿರುವ ಪ್ರಾಚೀನ ಅವಶೇಷಗಳಾಗಿವೆ.

ಜಕ್ಕಲಿ ಗ್ರಾಮದಲ್ಲಿ ಸಂಗಮೇಶ್ವರ ಹಾಗೂ ವೀರಭದ್ರ ಎಂಬ ಇನ್ನೂ ಎರಡು ದೇವಾಲಯಗಳಿದ್ದವು. ಆದರೆ ಅವು ಸಹ ಸಂಪೂರ್ಣವಾಗಿ ನವೀಕರಣಗೊಂಡಿವೆ. ಸಂಗಮೇಶ್ವರ ದೇವಾಲಯದ ಹೊರಗೆ ದೇವಾಲಯದ ಕೆಲವು ಅವಶೇಷ ಹಾಗೂ ಶಾಸನ ಶಿಲ್ಪವನ್ನು ಬಿಟ್ಟರೆ ಬೇರೆನೂ ಕಾಣಸಿಗುವುದಿಲ್ಲ. ಹಾಗೆಯೇ ವೀರಭದ್ರ ದೇವಾಲಯದಲ್ಲಿಯೂ ಮುಂಭಾಗದಲ್ಲಿ ಒಂದೇ ಕಲ್ಲಿನಲ್ಲಿ ಎರಡು ಶಿಲ್ಪಗಳಿದ್ದು ಅವುಗಳಲ್ಲಿ ಒಂದು ಪುರುಷ ಶಿಲ್ಪವಾಗಿದ್ದು ಎರಡು ಕೈಗಳನ್ನು ಮುಗಿದು ದೇವರಲ್ಲಿ ಧ್ಯಾನಾಸಕ್ತನಾಗಿ ನಿಂತಿರುವುದು ಸ್ತ್ರೀ ಶಿಲ್ಪವು ಎರಡೂ ಕೈಗಳನ್ನು ಕೆಳಬಿಟ್ಟು ನಿಂತಿದೆ. ಹಾಗೆಯೇ ಎಡಭಾಗದಲ್ಲಿ ಒಂದು ಶಾಸನಶಿಲ್ಪವನ್ನು ನಿಲ್ಲಿಸಲಾಗಿದೆ.

ಜಕ್ಕಲಿ ಗ್ರಾಮದಲ್ಲಿ ಒಟ್ಟು ಐದು ಶಾಸನಗಳು[೬೮] ಪ್ರಕಟಗೊಂಡಿವೆ. ಅವುಗಳಲ್ಲಿ ಒಂದು ಬಾದಾಮಿ ಚಾಲುಕ್ಯ ವಿಜಯಾದಿತ್ಯನ ಕಾಲಕ್ಕೆ ಸೇರಿದ್ದಾಗಿದ್ದರೆ ಉಳಿದವು ಕಲ್ಯಾಣ ಚಾಲುಕ್ಯರ

ಕಾಲಕ್ಕೆ ಸಂಬಂಧಿಸಿದವುಗಳು. ಬಾದಾಮಿ ಚಾಲುಕ್ಯರ ಕಾಲದ ಶಾಸನವು ಅಪೂರ್ಣವಾಗಿದ್ದು ಕೇವಲ ಜಕ್ಕಲಿ ಎಂಬ ಮಾಹಿತಿಯನ್ನು ಮಾತ್ರ ನೀಡುತ್ತದೆ. ಸಂಗಮೇಶ್ವರ ಗುಡಿಯಲ್ಲಿನ ಎರಡು ಶಾಸನಗಳು ೧೨ನೇ ಶತಮಾನಕ್ಕೆ ಸೇರಿದ್ದು ಎಡ ಗೋಡೆಯಲ್ಲಿರುವ ಶಾಸನವು ಅತ್ಯಂತ ತ್ರುಟಿತವಾಗಿದ್ದು ಅಸ್ಪಷ್ಟವಾಗಿದೆ. ಹೀಗಾಗಿ ಯಾವುದೇ ಮಾಹಿತಿಗಳು ಲಭ್ಯವಿಲ್ಲ. ಇದೇ ಗುರಿಯ ಮುಂಭಾಗದಲ್ಲಿರುವ ಕ್ರಿ.ಶ.೧೧೨೦ರ ತೇದಿವುಳ್ಳ ಆರನೇ ವಿಕ್ರಮಾದಿತ್ಯನ ಕಾಲದ ಶಾಸನವು ಜಕ್ಕಲಿಯ ಇನ್ನೂರು ಮಹಾಜನರ ವಿನಂತಿಯ ಮೇರೆಗೆ ಕುಮಾರ ಸೋವಿ ದೇವರಸರು ಸೋಮೇಶ್ವರ ದೇವರಿಗೆ ಭೂಮಿಯನ್ನು ದಾನ ಕೊಟ್ಟಿರುವ ಮಾಹಿತಿಯನ್ನು ನೀಡುತ್ತದೆ.

ಕಲ್ಮೇಶ್ವರ ದೇವಾಲಯದ ಮುಂಭಾಗದಲ್ಲಿರುವ ಶಾಸನವು ಆರನೆಯ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ್ದು ಕ್ರಿ.ಶ. ೧೧೧೭ ತೇದಿಯುಳ್ಳದ್ದಾಗಿದೆ. ಇದು ಸಹ ತ್ರುಟಿತಗೊಂಡಿದ್ದು ಬಸದಿಯೊಂದರ ಜೀರ್ಣೋದ್ಧಾರಕ್ಕಾಗಿ ದಾನ ನೀಡಿರುವ ಉಲ್ಲೇಖವನ್ನು ಹೊಂದಿದೆ. ವೀರಭದ್ರ ಗುಡಿಯ ಮುಂಭಾಗದಲ್ಲಿ ಕಲ್ಯಾಣ ಚಾಲುಕ್ಯ ಮೂರನೆ ಸೋಮೇಶ್ವರನ ಕಾಲಕ್ಕೆ ಸೇರಿದ್ದ ಶಾಸನ ಕ್ರಿ.ಶ.೧೧೩೫ ತೇದಿಯನ್ನು ಹೊಂದಿದೆ. ದಂಡನಾಯಕ ಮಹಾದೇವಯ್ಯನು ಜಕ್ಕಲಿಯ ಕೆರೆಯ ನಿರ್ಮಾಣಕ್ಕಾಗಿ ಭೂಮಿಯನ್ನು ದಾನ ಕೊಟ್ಟಿರುವ ಉಲ್ಲೇಖವನ್ನು ಹೊಂದಿದೆ. ಶಾಸನದಲ್ಲಿ ಉಲ್ಲೇಖಿಸಿರುವ ದಂಡನಾಯಕ ಮಹಾದೇವಯ್ಯನೆಂದರೆ ಬಹುಶಃ ಇಟಗಿಯಲ್ಲಿ ಜಗತ್ಪ್ರಸಿದ್ಧ ಮಹಾದೇವ ದೇವಾಲಯದ ನಿರ್ಮಾಣಕಾರ ದಂಡನಾಯಕ ಮಹಾದೇವಯ್ಯನೇ ಆಗಿರಬಹುದು. ಕಾರಣ ಈ ಎರಡು ಗ್ರಾಮಗಳು ಮಾಸವಾಡಿ-೧೪೦ರ ಒಂದೇ ಆಡಳಿತ ವಿಭಾಗಕ್ಕೆ ಒಳಪಟ್ಟಿದ್ದವು.

## ೪೬. ಕಲ್ಲಪ್ಪನ ದೇವಾಲಯ

ಕ್ರಿ.ಶ.೧೮-೧೯ನೇ ಶತಮಾನದಲ್ಲಿ ವಿಜಯನಗರೋತ್ತರ ಶೈಲಿಯಲ್ಲಿ ನಿರ್ಮಿತವಾದ ನರೇಗಲ್ಲು ರಸ್ತೆಯಲ್ಲಿರುವ ಮಲ್ಲಾಪುರದ ಕಲ್ಲಪ್ಪನ ದೇವಾಲಯವು[೭೮] ಪೂರ್ವಾಭಿಮುಖವಾಗಿದ್ದು ಸಂಪೂರ್ಣ ನವೀಕರಣಗೊಂಡಿದೆ. ಚೌಕಾಕಾರದ ತಲವಿನ್ಯಾಸವನ್ನು ಹೊಂದಿದ ದೇವಾಲಯದ ಗರ್ಭಗೃಹದಲ್ಲಿ ಪ್ರಾಚೀನ ಚೌಕಾಕಾರದ ಪೀಠವುಳ್ಳ ಲಿಂಗ, ಗಣೇಶ ಹಾಗೂ ನಂದಿಯ ಶಿಲ್ಪಗಳಿವೆ.

ಇದೇ ಗ್ರಾಮದ ಹನುಮಂತದೇವರ ಗುಡಿಯ ಬಳಿಯಲ್ಲಿ ಕ್ರಿ.ಶ.೧೧೫೬ರ ತೇದಿವುಳ್ಳ ಕಲ್ಯಾಣ ಚಾಲುಕ್ಯ ಮೂರನೆಯ ತೈಲನ ಕಾಲದ ಶಾಸನವೊಂದು[೭೯] ಪ್ರಕಟಗೊಂಡಿದೆ. ಇದು

ದಂಡನಾಯಕ ದುಗ್ಗಿಮಯ್ಯನಿಂದ ದಾನ ನೀಡಿದ ಹಾಗೂ ವಿದಿಗೆ ಕೆರೆಯ ಉಲ್ಲೇಖವನ್ನು ನೀಡುತ್ತದೆ. ಆದರೆ ವಿದಿಗೆ ಎಂಬ ಗ್ರಾಮ ಯಾವುದು ಎಂಬುದು ಇದುವರೆಗು ತಿಳಿಯಲಾಗಿಲ್ಲ.

## ೪೭. ಗೋನಪ್ಪ ಗುಡಿ

ಮಾರನಬಸರಿ ಗ್ರಾಮದ ಹೊರಭಾಗದಲ್ಲಿರುವ ಈ ಗೋನಪ್ಪ ದೇವಾಲಯವು[೯೦] ೧೮-೧೯ನೇ ಶತಮಾನಕ್ಕೆ ಸೇರಿದ ವಿಜಯನರಗೋತ್ತರ ಶೈಲಿಯನ್ನು ಹೊಂದಿದ್ದು ಪೂರ್ವಾಭಿಮುಖವಾಗಿದೆ. ಪ್ರಾಚೀನ ದೇವಾಲಯ ಸಂಪೂರ್ಣವಾಗಿ ಬಿದ್ದು ಹೋಗಿದ್ದು ಗ್ರಾಮಸ್ಥರು ಸ್ಥಳೀಯವಾಗಿ ಸಿಗುವ ಕಲ್ಲು ಹಾಗೂ ಇಟ್ಟಿಗೆಗಳಿಂದ ದೇವಾಲಯವನ್ನು ಮರು ನಿರ್ಮಿಸಿದ್ದಾರೆ. ಗರ್ಭಗೃಹ ಹಾಗೂ ಮಂಟಪಗಳು ಇದರ ಭಾಗಗಳಾಗಿವೆ.

ಇದೇ ಗ್ರಾಮದ ಕೆರೆಯ ದಂಡೆ ಮೇಲೆ ಕಲ್ಲಪ್ಪನ ಹಳೆಯ ಗುಡಿಯೊಂದಿತ್ತು. ಅದು ಸಹ ಸಂಪೂರ್ಣವಾಗಿ ಬಿದ್ದಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯದ ಪ್ರಾಚ್ಯಾವಶೇಷಗಳು ಈವರೆಗೂ ಅಲ್ಲಿರುವುದನ್ನು ಕಾಣುತ್ತೇವೆ.

## ೪೮. ಈಶ್ವರ ದೇವಾಲಯ

ಮುಶಿಗೇರಿ ಗ್ರಾಮದಲ್ಲಿರುವ ೧೮-೧೯ನೇ ಶತಮಾನಕ್ಕೆ ಸೇರಿದ ಈಶ್ವರ ದೇವಾಲಯವು[೯೧] ವಿಜಯನಗರೋತ್ತರ ಶೈಲಿಯುಳ್ಳದ್ದಾಗಿದ್ದು, ಪೂರ್ವಾಭಿಮುಖವಾಗಿದೆ. ಚೌಕಾಕಾರದ ತಲನಕ್ಷೆಯನ್ನು ಹೊಂದಿದ ಈ ದೇವಾಲಯ ಪ್ರಾಚೀನ ಕಾಲದ್ದಾಗಿದ್ದರೂ ಕಾಲಾನಂತರದಲ್ಲಿ ಇದನ್ನು ಮರು ನಿರ್ಮಿಸಲಾಗಿದೆ. ಈ ದೇವಾಲಯವು ಗರ್ಭಗೃಹ ಹಾಗೂ ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ ವೃತ್ತಾಕಾರ ಪೀಠವುಳ್ಳ ಲಿಂಗ ಹಾಗೂ ಪ್ರಾಚೀನ ಆಲಿಂಗನ ಉಮಾ-ಮಹೇಶ್ವರನ ಶಿಲ್ಪವಿದೆ. ಈ ಶಿಲ್ಪಗಳು ಕಿರೀಟಧಾರಿಗಳಾಗಿದ್ದು ವಸ್ತ್ರಾಭರಣದ ಅಲಂಕಾರವನ್ನು ಹೊಂದಿವೆ. ಆದರೆ ಶಿಲ್ಪವು ಭಾಗಶಃ ಸವೆದು ಹೋಗಿದ್ದರಿಂದ ಆಯುಧ ಹಾಗೂ ಅಲಂಕರಣೆಗಳನ್ನು ವಿವರಿಸುವುದು ಕಷ್ಟ.

## ೪೯. ರಾಮಲಿಂಗ ದೇವಾಲಯ

ಇಟಗಿಯ ರಾಮಲಿಂಗ ದೇವಾಲಯವು[೯೨] ಗ್ರಾಮದಲ್ಲಿದ್ದು ೧೯ನೇಯ ಶತಮಾನಕ್ಕೆ ಸೇರಿದುದಾಗಿದೆ. ಆಧುನಿಕ ಶೈಲಿಯಲ್ಲಿ ನಿರ್ಮಾಣವಾದ ದೇವಾಲಯ ಪೂರ್ವಾಭಿಮುಖವಾಗಿದೆ.

ಚಚ್ಚೌಕ ತಲನಕ್ಷೆಯನ್ನು ಹೊಂದಿರುವ ದೇವಾಲಯವು ಗರ್ಭಗೃಹ, ಅಂತರಾಳದ ಭಾಗಗಳನ್ನು ಒಳಗೊಂಡಿದೆ. ಅಂದದ ಭುವನೇಶ್ವರಿ ಕೆತ್ತನೆಯನ್ನೊಳಗೊಂಡ ಗರ್ಭಗೃಹದಲ್ಲಿ

ಚೌಕಾಕಾರದ ಎತ್ತರದ ಪೀಠವನ್ನು ಹೊಂದಿದ ಹಾಗೂ ವೃತ್ತಾಕಾರದ ರುದ್ರಭಾಗವನ್ನು ಹೊಂದಿದ ಲಿಂಗವಿದೆ. ಇದರ ಮುಂದೆಯೇ ಭಗ್ನಗೊಂಡ ನಂದಿವಿಗ್ರಹವನ್ನಿಡಲಾಗಿದೆ. ಗರ್ಭಗೃಹಕ್ಕೆ ಅಂತರಾಳ ಭಾಗವಿದ್ದು ಸುಂದರ ಕೆತ್ತನೆಯುಳ್ಳ ಭುವನೇಶ್ವರಿಯನ್ನು ಹೊಂದಿದೆ. ಪ್ರಾಚೀನ ನಾಗಶಿಲ್ಪಗಳನ್ನೂ ಸಹ ಗರ್ಭಗೃಹದಲ್ಲಿಡಲಾಗಿದೆ. ಅಧಿಷ್ಠಾನ ಭಾಗ ಸಂಪೂರ್ಣ ಮುಚ್ಚಿದ್ದು ಶಿಖರ ಭಾಗ ನಾಶ ಹೊಂದಿದೆ. ಇಟಗಿ ಗ್ರಾಮದಲ್ಲಿ ಭೀಮಾಂಭಿಕೆ ಎಂಬ ಸ್ತ್ರೀ ದೇವತೆಯ ಆರಾಧನೆಯು ಅಧಿಕ ಪ್ರಚಲಿತದಲ್ಲಿದೆ.

## ೫೦. ಕಲ್ಮೇಶ್ವರ ಹಾಗೂ ಪಂಚಲಿಂಗೇಶ್ವರ ದೇವಾಲಯಗಳು

ಅಸೂಟಿ ಗ್ರಾಮದಲ್ಲಿ ಪ್ರಾಚೀನ ದೇವಾಲಯಗಳು ಎಂದು ಗುರುತಿಸಲಾಗಿದ್ದ ಕಲ್ಮೇಶ್ವರ ಹಾಗೂ ಪಂಚಲಿಂಗೇಶ್ವರ ದೇವಾಲಯಗಳು[೮೩] ಪ್ರಸ್ತುತದಲ್ಲಿ ನೆಲಸಮಗೊಂಡಿವೆ. ದೇವಾಲಯಕ್ಕೆ ಸಂಬಂಧಿಸಿದ ಅವಶೇಷಗಳು ದೇವಾಲಯದ ಆವರಣದಲ್ಲಿ ಇಡಲಾಗಿದೆ. ಕಲ್ಮೇಶ್ವರ ದೇವಾಲಯವನ್ನು ಸಂಪೂರ್ಣವಾಗಿ ಕೆಡವಿ ಹಾಕಲಾಗಿದ್ದು, ದೇವಾಲಯದಲ್ಲಿನ ಚೌಕಾಕಾರದ ಪೀಠವುಳ್ಳ ಲಿಂಗಗಳು ನಂದಿ ಶಿಲ್ಪಗಳು ಹಾಗೂ ಭಗ್ನಗೊಂಡ ಗಣೇಶನ ಶಿಲ್ಪವನ್ನು ಒಂದು ಮರದಡಿಯಲ್ಲಿ ಇಡಲಾಗಿದೆ. ಅಲ್ಲದೇ ದೇವಾಲಯವಿದ್ದ ಸ್ಥಳದಲ್ಲಿ ಎರಡು ಅಪ್ರಕಟಿತ ಶಾಸನ ಶಿಲ್ಪಗಳನ್ನು ನಿಲ್ಲಿಸಲಾಗಿದೆ. ಇದರಲ್ಲಿ ಒಂದು ಶಾಸನವು ಸಂಪೂರ್ಣವಾಗಿ ಸವೆದು ಹೋಗಿದ್ದು ಅದರಲ್ಲಿನ ಲಿಪಿಯು ಕಂಡುಬರುವುದಿಲ್ಲ. ಇನ್ನೊಂದು ಶಾಸನವೂ ಸಹ ಅದೇ ಸ್ಥಿತಿಯಲ್ಲಿದ್ದರೂ ಕೆಲವು ಅಕ್ಷರಗಳು ಕಂಡುಬರುತ್ತವೆ. ಎರಡೂ ಶಾಸನಗಳ ಕೆಳಭಾಗ ಮಣ್ಣಿನಲ್ಲಿ ಹುದುಗಿವೆ. ಪಂಚಲಿಂಗೇಶ್ವರ ದೇವಾಲಯದ ಸ್ಥಿತಿಯೂ ಇದೇ ಅವಸ್ಥೆಯಲ್ಲಿದೆ. ದೇವಾಲಯದ ಅವಶೇಷಗಳಾದ ಚೌಕಾಕಾರದ ಅಲಂಕೃತ ಪೀಠವನ್ನು ಹೊಂದಿರುವ ಲಿಂಗ ಹಾಗೂ ಕೆಲವು ಪೀಠವಿಲ್ಲದ ಲಿಂಗದ ರುದ್ರಭಾಗಗಳು, ಚಿಕ್ಕ ಗಾತ್ರದ ಗಣೇಶನ ಶಿಲ್ಪ ಮತ್ತು ಭಗ್ನಗೊಂಡ ಮಹಿಷಾಸುರ ಮರ್ದಿನಿಯ ಶಿಲ್ಪಗಳೆಲ್ಲವನ್ನು ಕೆಡವಿ ಹಾಕಲಾದ ದೇವಾಲಯದ ಸ್ಥಳದಲ್ಲಿಯೇ ಇಡಲಾಗಿದೆ.

**ಅಡಿಟಿಪ್ಪಣಿಗಳು**

೧. ಬಾಲಸುಬ್ರಮಣ್ಯ, ವಾಸುದೇವನ್ ಪಿ.ಎಸ್.ರಮೇಶ ನಾಯಕ, **ಕರ್ನಾಟಕ ದೇವಾಲಯ ಕೋಶ, ಗದಗ ಜಿಲ್ಲೆ,** ಪು.೨೧೮

೨. ಧಾ.ಜಿ.ಶಾ.ಸೂ.ಸಂ.ರೋ ೭೩, ಪು.೧೮; SIIXV No.43,27, SII XI-i, 69

೩. ಕ.ದೇ.ಕೋ.ಗ.ಜಿ. ಪು.೨೦೮

೪. ಧಾ.ಜಿ.ಶಾ.ಸೂ.ಸಂ.ರೋ ೪೫, ಪು.೧೭; SII XI-i No.38

೫. ಅದೇ, ೪೪ ಪು.೧೭, SII XI-ii, No.144 ಹಾಗೂ SII.XV No.138

೬. ಕ.ದೇ.ಕೋ.ಗ.ಜಿ. ಪು.೨೧೯

೭. ಧಾ.ಜಿ.ಶಾ.ಸೂ.ಸಂ.ರೋ ೮೧, ಪು.೧೮; SII XV.137 & EI XIX P.22-26

೮. ಕ.ದೇ.ಕೋ.ಗ.ಜಿ.ಪು.೨೨೦

೯. ಅದೇ, ಪು.೨೨೧

೧೦. ಧಾ.ಜ.ಶಾ.ಸೂ.ಸಂ.ರೋ. ೭೮, ಪು.೧೮; SII XI-i, 59; EI XIX Pp.222-26

೧೧. ಕ.ದೇ.ಕೋ.ಗ.ಜ., ಪು.೨೨೩

೧೨. ಅದೇ, ಪು.೨೨೪

೧೩. ಧಾ.ಜಿ.ಶಾ.ಸೂ.ಸಂ.ರೋ ೭೫, ೭೬, ೭೯, ಪು.೧೮; EI XII Pp.18-85; SII XI-i 491 EI XIII Pp.18.87 & SII XI-ii 159

೧೪. ಕ.ದೇ.ಕೋ.ಗ.ಪಿ. ಪು.೨೨೯

೧೫. ವಸಂತಲಕ್ಷ್ಮಿ ಕೆ., *ಗದಗ ಜಿಲ್ಲೆಯಲ್ಲಿ ಕಲ್ಯಾಣ ಚಾಲುಕ್ಯರ ಕಲೆ ಮತ್ತು ವಾಸ್ತುಶಿಲ್ಪ,* ಗೋಪಾಲ ಆರ್(ಸಂ), ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.೨೧೧

೧೬. ಧಾ.ಜಿ.ಶಾ.ಸೂ.ಸಂ.ರೋ ೮೭, ೮೮, ೮೯ ಪು.೧೯; SII XI-i 42, SII XI-ii 129 SII XV 246

೧೭. ಕ.ದೇ.ಕೋ.ಗ.ಜಿ. ಪು.೨೩೨

೧೮. ಧಾ.ಜ.ಶಾ.ಸೂ.ಸಂ.ರೋ. ೯೪, ೯೫ ಪು.೧೯; SII XI-i 91; EI XV Pp.80-83; SII XI-i 93; EI XV Pp.೮೩-೮೫

೧೯. ಕ.ದೆ.ಕೋ.ಗ.ಜಿ, ಪು.೧೮೯

೨೦. ಧಾ.ಜಿ.ಶಾ.ಸೂ.ಸಂ.ರೋ. ೧೭, ಪು.೧೬; SII XI-ii 120

೨೧. ಕ.ದೇ.ಕೋ.ಗ.ಜಿ., ಪು.೧೯೦

೨೨. ಧಾ.ಜ.ಶಾ.ಸೂ.ಸಂ.ರೋ ೧೯,೨೦,೨೧ ಪು.೧೬; SII XI-i 17, SII XV 492, SII XV 1

೨೩. ಕ.ದೇ.ಕೋ.ಗ.ಜಿ., ಪು.೨೧೦

೨೪. ಈ ದೇವಾಲಯವು ಕ.ದೇ.ಕೋ.ಗ.ಜಿ.ದಲ್ಲಿ ದಾಖಲಾಗಿಲ್ಲ

೨೫. ಕ.ದೇ.ಕೋ.ಗ.ಜಿ., ಪು.೨೨೫

೨೬. ನರೆಗಲ್ಲ ಎಂ.ಎಸ್., ಉತ್ತರ ಗದಗ ಜಿಲ್ಲೆಯ ಶಾಸನಗಳು - ಒಂದು ಅಧ್ಯಯನ(ಅಪ್ರಕಟಿತ ಮಹಾಪ್ರಬಂಧ), ಪು.೨೫

೨೭. ಕ.ದೇ.ಕೋ.ಗ.ಜ. ಪು.೨೩೧

೨೮. ಅದೇ, ಪು.೨೩೫

೨೯. ಧಾ.ಜಿ.ಶಾ.ಸೂ.ಸಂ.ರೋ. ೯೨, ೯೬, ಪು.೧೯; SII XI-i 55, 95; EI XV Pp.85-94

೩೦. ಕ.ದೇ.ಕೋ.ಗ.ಜಿ. ಪು.೨೪೨

೩೧. ಅದೇ, ಪು.೨೪೩

೩೨. ಧಾ.ಜಿ.ಶಾ.ಸೂ.ಸಂ.ರೋ ೧೦೮, ೧೦೯ ಪು.೧೯; SII XV 13

೩೩. ಕ.ದೇ.ಕೋ.ಗ.ಜ., ಪು.೨೪೪

೩೪. ಈ ದೇವಾಲಯವು ಕ.ದೇ.ಕೋ.ಗ.ಜಿ.ದಲ್ಲಿ ದಾಖಲಾಗಿಲ್ಲ

೩೫. ಅದೇ, ಪು.೧೮೪

೩೬. ಧಾ.ಜಿ.ಶಾ.ಸೂ.ಸಂ.ರೋ ೧೨, ಪು.೧೬

೩೭. ಕ.ದೇ.ಕೋ.ಗ.ಜ. ಪು.೧೯೩

೩೮. ಧಾ.ಜಿ.ಶಾ.ಸೂ.ಸಂ.ರೋ.೩೨, ಪು.೧೭; SII XV 84

೩೯. ಕ.ದೇ.ಕೋ.ಗ.ಜ. ಪು.೧೯೩

೪೦. ಧಾ.ಜಿ.ಶಾ.ಸೂ.ಸಂ.ರೋ. ೩೧, ಪು.೧೭; SII XI-i 112

೪೧. ಕ.ದೇ.ಕೋ.ಗ.ಜಿ.ಪು.೨೦೦

೪೨. ಅದೇ, ಪು.೨೦೬

೪೩. ಅದೇ, ಪು.೨೦೭

೪೪. ಅದೇ, ಪು.೨೧೫

೪೫. ಈ ದೇವಾಲಯವು ಕ.ದೇ.ಕೋ.ಗ.ಜಿ.ದಲ್ಲಿ ದಾಖಲಾಗಿಲ್ಲ

೪೬. ಅದೇ

೪೭. ಧಾ.ಜಿ.ಶಾ.ಸೂ.ಸಂ.ರೋ.೬೨, ಪು.೧೮; SII XV 566

೪೮. ಅದೇ, ೫೭,೫೮,೬೩,೬೪,೬೫ ಪು.೧೮; SII XI-i 117, SII XI-ii 189, SII XV.180.114

೪೯. ಕ.ದೇ.ಕೋ.ಗ.ಜಿ.ಪು.೨೧೭

೫೦. ಧಾ.ಜಿ.ಶಾ.ಸೂ.ಸಂ.ರೋ ೭೦,೭೧,೭೨ ಪು.೧೮; SII XV 197, SII XV 263, SII XV 699

೫೧. ಕ.ದೇ.ಕೋ.ಗ.ಜಿ.ಪು.೧೮೭

೫೨. ಧಾ.ಜಿ.ಶಾ.ಸೂ.ಸಂ.ರೋ. ೧೩,೧೪,೧೫,೧೬ ಪು.೧೬, SII XI-ii 122; SII XV 237, 720, 727

೫೩. ಕ.ದೇ.ಕೋ.ಗ.ಜಿ.ಪು.೧೯೧

೫೪. ಧಾ.ಜಿ.ಶಾ.ಸೂ.ಸಂ.ರೋ.೨೬,೨೭,೨೮,೨೯,೩೦ ಪು.೧೭; SII XV 74, SII XV 165, 245

೫೫. ಕ.ದೇ.ಕೋ.ಗ.ಜಿ.ಪು.೧೯೫

೫೬. ಅದೇ, ಪು.೧೯೯

೫೭. ಅದೇ, ಪು.೧೯೬

೫೮. ಧಾ.ಜ.ಶಾ.ಸೂ.ಸಂ.ರೋ. ೩೩ ಪು.೧೭; SII XV 124 ೧೭೪

೫೯. ಕ.ದೇ.ಕೋ.ಗ.ಜಿ, ಪು.೨೦೦

೬೦. ಧಾ.ಜಿ.ಶಾ.ಸೂ.ಸಂ.ರೋ.೩೪, ೩೫, ೩೬, ಪು.೧೭; SII XI-ii 170, JBBRAS XI Pp.247, SII XV 28, JBBRAS XI Pp.253, SII XV 75

೬೧. ಕ.ದೇ.ಕೋ.ಗ.ಜಿ.೨೧೧

೬೨. ಧಾ.ಜಿ.ಶಾ.ಸೂ.ಸಂ.ರೋ. ೫೩, ೫೪, ಪು.೧೭; SII XV 192, SII XI-ii 119; JBBRAS XI P.224

೬೩. ಕ.ದೇ.ಕೋ.ಗ.ಜಿ.ಪು.೨೧೨

೬೪. ಧಾ.ಜಿ.ಶಾ.ಸೂ.ಸಂ.ರೋ.೪೮, ೫೨ ಪು.೧೭; SII XV 42; JBBRAS XI Pp.239; SII XV 211

೬೫. ಕ.ದೇ.ಕೋ.ಗ.ಜ. ಪು.೨೧೩

೬೬. ಅದೇ, ಪು.೨೩೮

೬೭. ಧಾ.ಜಿ.ಶಾ.ಸೂ.ಸಂ.ರೋ.೧೦೨, SII XI-ii 164; EI XV Pp.105-108

೬೮. ಕ.ದೇ.ಕೋ.ಗ.ಜಿ. ಪು.೨೪೦

೬೯. ಧಾ.ಜಿ.ಶಾ.ಸೂ.ಸಂ.ರೋ. ೧೦೧, ಪು.೧೯; SII XI-ii 153

೭೦. ಕ.ದೇ.ಕೋ.ಗ.ಜಿ., ಪು.೧೮೧

೭೧. ಧಾ.ಜಿ.ಶಾ.ಸೂ.ಸಂ.ರೋ. ೨, ೩ ಪು.೧೬; SII XI-ii 192, 205

೭೨. ಕ.ದೆ.ಕೋ.ಗ.ಜಿ., ಪು.೧೮೨

೭೩. ಧಾ.ಜಿ.ಶಾ.ಸೂ.ಸಂ.ರೋ.೧೦, ಪು.೧೬; SII XV 718

೭೪ ಅದೇ ೧,೫,೬,೭,೮,೯ ಪು.೧೬; SII XI-ii 163, 176, SII XV 127,68,243,244, RI VI 60, SII XV 688

೭೫. ಕ.ದೇ.ಕೋ.ಗ.ಜಿ, ಪು.೨೨೭

೭೬. ಧಾ.ಜಿ.ಶಾ.ಸೂ.ಸಂ.ರೋ.೪೦, ೪೧, ೪೨, ೪೩, ೪೪, ಪು.೧೭; SII XI-i 3, SII XV 91, ೧೮, SII XI-ii 165,168

೭೭. ಕ.ದೇ.ಕೋ.ಗ.ಜಿ.ಪು.೨೧೪

೭೮. ಧಾ.ಜಿ.ಶಾ.ಸೂ.ಸಂ.ರೋ.೬೮, ಪು.೧೮; SII XV 53

೭೯. ಕ.ದೇ.ಕೋ.ಗ.ಜಿ, ಪು.೨೧೫

೮೦. ಅದೇ, ಪು.೨೧೫

೮೧. ಅದೇ, ಪು.೧೮೭

೮೨. ಅದೇ, ಪು.೧೮೩

೮೩. ಅದೇ, ಪು.೧೮೪

## ರೋಣ ತಾಲೂಕಿನ ಶೈವ ದೇವಾಲಯಗಳ ಸಂಕ್ಷಿಪ್ತ ವಿವರಗಳು

| ಕ್ರಸಂ. | ಗ್ರಾಮ | ಸ್ಮಾರಕ | ಸ್ಥಳ | ಕಾಲಮಾನ | ಶೈಲಿ | ಅಭಿಮುಖ |
|---|---|---|---|---|---|---|
| ೧. | ರಾಜೂರು | ರಾಮಲಿಂಗೇಶ್ವರ | ಗ್ರಾಮದ ಆಗ್ನೇಯ | ೯-೧೦ನೇ ಶತಮಾನ | ರಾಷ್ಟ್ರಕೂಟ | ಪೂರ್ವ |
| ೨. | ನರೇಗಲ್ಲು | ಸೋಮೇಶ್ವರ (ನಾರಾಯಣ) (ಬಸವಿ) | ಗ್ರಾಮದಲ್ಲಿ | ೧೦ನೇ ಶತಮಾನ | ,, | ಉತ್ತರ |
| ೩. | ರೋಣ | ಸೋಮೇಶ್ವರ | ಬ್ರಾಹ್ಮಣರ ತೋಟ | ೧೦-೧೧ನೇ ಶತಮಾನ | ,, | ಪೂರ್ವ |
| ೪. | ರೋಣ | ರಾಮಲಿಂಗ | ಕೆರೆಯ ದಂಡೆ | ,, | ,, | ,, |
| ೫. | ರೋಣ | ಕಲ್ಮೇಶ್ವರ(ಈಶ್ವರ) | ಪಟ್ಟಣದಲ್ಲಿ | ,, | ,, | ,, |
| ೬. | ರೋಣ | ಲೋಕನಾಥ | ಗೌಡರ ಓಣಿ | ,, | ,, | ,, |
| ೭ | ರೋಣ | ಬಸವಣ್ಣ(ದ್ರೋಣಾಚಾರ್ಯ) | ಪಟ್ಟಣದಲ್ಲಿ | ,, | ,, | ,, |
| ೮. | ಸವಡಿ | ಬ್ರಹ್ಮದೇವರ ಗುಡಿ(ತ್ರಿಮೂರ್ತಿಶ್ವರ) | ಗ್ರಾಮದಲ್ಲಿ | ,, | ,, | ,, |
| ೯. | ಸೂಡಿ | ಮಲ್ಲಿಕಾರ್ಜುನ | ಗ್ರಾಮದ ಪ್ರವೇಶದಲ್ಲಿ | ,, | ,, | ,, |
| ೧೦. | ಎರಿಬ್ಯಾಲೇರಿ | ರಾಮಲಿಂಗ | ಗ್ರಾಮದ ದಕ್ಷಿಣ | ೧೧-೧೨ನೇ ಶತಮಾನ | ಕಲ್ಯಾಣ ಚಾಲುಕ್ಯ | ,, |

| | | | | | | |
|---|---|---|---|---|---|---|
| ೧೧. | ಕರಮಡಿ | ಕಲ್ಮೇಶ್ವರ ಗ್ರಾಮದಲ್ಲಿ | ,, | ,, | ,, | ,, |
| ೧೨. | ನರೇಗಲ್ಲು | ಚಂದ್ರಮೌಳೇಶ್ವರ | ಗ್ರಾಮದ ಹೊರಭಾಗ | ,, | ,, | |
| ೧೩. | ಬೊಮ್ಮಸಾಗರ | ರಾಮಲಿಂಗ | ಗ್ರಾಮದ ಹೊರಭಾಗ | ೧೧-೧೨ನೇ ಶತಮಾನ | ಕಲ್ಯಾಣಚಾಲುಕ್ಯ | ಪೂರ್ವ |
| ೧೪. | ನಿಡಗುಂದಿ | ದಾಸಮೇಶ್ವರ | ಗ್ರಾಮದಲ್ಲಿ ,, | ,, | ,, | ,, |
| ೧೫. | ನಿಡಗುಂದಿ | ನಾರಾಯಣ | ,, | ,, | ,, | ,, |
| ೧೬. | ರೋಣ | ಈಶ್ವರ | ಮಾಳಗೌಡರ ಓಣಿ | ೧೧-೧೨ನೇ ಶತಮಾನ | ,, | ,, |
| ೧೭. | ಸವಡಿ | ದೊಡ್ಡಲಿಂಗೇಶ್ವರ | ಗ್ರಾಮದ ಈಶಾನ್ಯ | ,, | ,, | ,, |
| ೧೮. | ಸೂಡಿ | ಜೋಡಿ ಕಲಶ | ಗ್ರಾಮದ ದಕ್ಷಿಣ | ,, | ,, | ,, |
| ೧೯. | ಹಿರೇಹಾಳ | ರಾಮಲಿಂಗ | ಗ್ರಾಮದಲ್ಲಿ | ,, | ,, | ,, |
| ೨೦. | ಹುನಗುಂಡಿ | ಕಲ್ಮೇಶ್ವರ | ಗ್ರಾಮದಲ್ಲಿ | ,, | ,, | ,, |
| ೨೧. | ಸೂಡಿ | ಗಣೇಶ(ಕಡ್ಲೆಕಾಳುಗಣಪ) | ರಸದಬಾವಿ ಎಡಭಾಗ | ೧೧-೧೨ನೇ ಶತಮಾನ | ಕಲ್ಯಾಣಚಾಲುಕ್ಯ | ಪೂರ್ವ |
| ೨೨. | ಇಟಗಿ | ಶಂಭುಲಿಂಗ | ಕೆರೆಯ ದಂಡೆ | ೧೨ನೇ ಶತಮಾನ | ,, | ,, |
| ೨೩. | ಕುರುಹಟ್ಟಿ | ಸೋಮೇಶ್ವರ | ಕೆರೆಯ ದಂಡೆ | ,, | ,, | ,, |
| ೨೪. | ನಿಡಗುಂದಿ | ಬಸವಣ್ಣದೇವರ | ,, | ೧೨ನೇ ಶತಮಾನ | ,, | ,, |

|  |  |  |  |  |  |  |  |
|---|---|---|---|---|---|---|---|
| ೧೫. | ನಿಡಗುಂದಿ | ಕಂಚೇಶ್ವರ | ,, | ,, | ,, | ,, |  |
| ೧೬. | ಕುಂಟೋಜಿ | ಚೆನ್ನ ಬಸವೇಶ್ವರ | ಗ್ರಾಮದ | ವಾಯವ್ಯ | ,, | ,, | ಪಶ್ಚಿಮ |
| ೧೭. | ಕೋಚಲಾಪುರ | ಮಲ್ಲಯ್ಯ ಅಜ್ಜಯ್ಯ | ಗ್ರಾಮದ | ಪಶ್ಚಿಮ | ,, | ,, | ಪೂರ್ವ |
| ೧೮. | ತೋಟಗಂಟಿ | ಕಲ್ಮೇಶ್ವರ | ಗ್ರಾಮದ | ಪಶ್ಚಿಮ | ,, | ,, | ,, |
| ೧೯. | ತೋಟಗಂಟಿ | ಮಲ್ಲಯ್ಯ | ಗ್ರಾಮದಲ್ಲಿ | ,, | ,, | ,, | ಉತ್ತರ |
| ೨೦. | ಮೆಣಸಗಿ | ಕಲ್ಮೇಶ್ವರ | ಗ್ರಾಮದ | ಪೂರ್ವ | ,, | ,, | ಪೂರ್ವ |
| ೨೧. | ಯಾವಗಲ್ಲ | ವೀರಭದ್ರ | ಗ್ರಾಮದಲ್ಲಿ | ೧೨-೧೩ನೇ ಶತಮಾನ | ,, | ,, | ಉತ್ತರ |
| ೨೨. | ಊಣಚಗೇರಿ | ಸಂಗಮೇಶ್ವರ | ಗ್ರಾಮದಲ್ಲಿ | ,, | ,, | ,, | ಪೂರ್ವ |
| ೨೩. | ಕಾಲಕಾಲೇಶ್ವರ | ಕಳಕಪ್ಪನ ಗುಡಿ | ಕಳಕಪ್ಪನ ಗುಡ್ಡ | ,, | ,, | ,, | ದಕ್ಷಿಣ |
| ೨೪. | ಕೋಡಗಾನೂರು | ಕಂಚೇಶ್ವರ | ಗ್ರಾಮದಲ್ಲಿ | ,, | ,, | ,, | ಪೂರ್ವ |
| ೨೫. | ಕೋಡಗಾನೂರು | ವೀರಭದ್ರ | ,, | ,, | ,, | ,, | ಉತ್ತರ |
| ೨೬. | ಕೊಡಿಕೊಪ್ಪ | ಮೂಲಬ್ರಹ್ಮೇಶ್ವರ | ,, | ,, | ,, | ,, | ,, |
| ೨೭. | ನರೇಗಲ್ಲು | ಕಲ್ಮೇಶ್ವರ | ಗ್ರಾಮದಲ್ಲಿ | ,, | ,, | ,, |  |
| ೨೮. | ನರೇಗಲ್ಲು | ತ್ರಿಪುರಾಂತಕ | ,, | ,, | ,, | ,, |  |

|  |  |  |  |  |  |  |  |
|---|---|---|---|---|---|---|---|
| ೩೯. | ಬೆಣಸಮಟ್ಟಿ | ಈಶ್ವರ | ಕೆರೆಯದಂಡೆ | ,, | ,, | ವಿ.ನ. | ಉತ್ತರ |
| ೪೦. | ಸೂಡಿ | ನಗರೇಶ್ವರ | ಹುಡೇದ ಗಡ್ಡಿ ಓಣಿ | ,, | ,, | ಕಲ್ಯಾಣಚಾಲುಕ್ಯ | ಪೂರ್ವ |
| ೪೧. | ಸೂಡಿ | ನೆಲಮನೆ | ಗ್ರಾಮದಲ್ಲಿ | ,, | ,, | ,, | ,, |
| ೪೨. | ಅಬ್ಬಿಗೇರಿ | ಈಶ್ವರ | ಕೆರೆಯ ದಂಡೆ | ೧೬-೧೭ನೇ ಶತಮಾನ | ,, | ,, | ದಕ್ಷಿಣ |
| ೪೩. | ಅಬ್ಬಿಗೇರಿ | ಜ್ಯೋತಿರ್ಲಿಂಗ | ಗ್ರಾಮದ ಉತ್ತರ | ,, | ,, | ,, |  |
| ೪೪. | ಶಾಂತಗಿರಿ | ಶಾಂತೇಶ್ವರ | ಗುಡ್ಡದ ಮೇಲೆ | ೧೭-೧೮ನೇ ಶತಮಾನ | ,, | ,, | ಪೂರ್ವ |
| ೪೫. | ಜಕ್ಕಲಿ | ಕಲ್ಮೇಶ್ವರ | ಗ್ರಾಮದಲ್ಲಿ | ೧೮-೧೯ನೇ ಶತಮಾನ | ,, | ,, | ,, |
| ೪೬. | ಮಲ್ಲಾಪುರ | ಕಲ್ಲಪ್ಪನ ಗುಡಿ | ನರೇಗಲ್ಲು ರಸ್ತೆ | ,, | ,, | ,, | ,, |
| ೪೭. | ಮಾರನಬಸರಿ | ಗೋನಪ್ಪ ಗುಡಿ | ಗ್ರಾಮದ ಹೊರಭಾಗ | ,, | ,, | ,, | ,, |
| ೪೮. | ಮುಶಿಗೇರಿ | ಈಶ್ವರ | ಗ್ರಾಮದಲ್ಲಿ | ,, | ,, | ,, | ,, |
| ೪೯. | ಇಟಗಿ | ರಾಮಲಿಂಗ | ಗ್ರಾಮದಲ್ಲಿ | ೧೯ನೇ ಶತಮಾನ | ಆಧುನಿಕ | ,, | ಪೂರ್ವ |
| ೫೦. | ಅಸೂಟಿ | ಕಲ್ಮೇಶ್ವರ | ಗ್ರಾಮದಲ್ಲಿ | ,, | ,, | ,, | ,, |

೫

# ಸಮಾರೋಪ

ಪ್ರಸ್ತುತ ಅಧ್ಯಯನವು 'ರೋಣ ತಾಲೂಕಿನ ಶೈವ ದೇವಾಲಯಗಳು' ಎಂಬ ಶೀರ್ಷಿಕೆಯಡಿಯಲ್ಲಿ ರೋಣ ಪ್ರದೇಶದಲ್ಲಿ ಕಂಡುಬರುವ ಶೈವದೇವಾಲಯಗಳ ಸವಿಸ್ತಾರವಾದ ವಿವರಣೆಗಳೊಂದಿಗೆ ಇಲ್ಲಿ ಶೈವಧರ್ಮವೇ ಪ್ರಬಲವಾಗಲು ಹಾಗೂ ಶೈವ ದೇವಾಲಯಗಳೇ ಅತಿ ಹೆಚ್ಚು ಪ್ರಮಾಣದಲ್ಲಿ ನಿರ್ಮಾಣವಾಗಲು ಕಾರಣಗಳನೇಂಬುದನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

ರೋಣ ಪ್ರದೇಶವು ವಿಶಿಷ್ಟ ಭೌಗೋಳಿಕ ಲಕ್ಷಣ ಹಾಗೂ ಐತಿಹಾಸಿಕ ಪ್ರಾಮುಖ್ಯತೆಯನ್ನು ಪಡೆದ ಪ್ರದೇಶವಾಗಿದೆ. ಪ್ರಾಗಿತಿಹಾಸ ಕಾಲದಿಂದ ಇತಿಹಾಸ ಕಾಲದವರೆಗಿನ ಹಲವು ಮಜಲುಗಳನ್ನು ಇದು ಒಳಗೊಂಡಿದೆ. ಗದಗ ಜಿಲ್ಲೆಯಲ್ಲಿಯೇ ಅತಿ ಹೆಚ್ಚು ಪ್ರಾಗಿತಿಹಾಸದ ನೆಲೆಗಳನ್ನು ಒಳಗೊಂಡ ತಾಲೂಕು ಪ್ರದೇಶವಾಗಿದೆ. ಮುಖ್ಯವಾಗಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ನೆಲೆಯನ್ನೊಳಗೊಂಡ ಜಿಲ್ಲೆಯ ಏಕೈಕ ತಾಲೂಕು ಇದಾಗಿದೆ. ರೋಣ ಪ್ರದೇಶವನ್ನು ಮೊದಲು 'ದ್ರೋಣಪುರ'ವೆಂದು ಕರೆಯಲಾಗುತ್ತಿತ್ತು ಎಂದು ಸ್ಥಳೀಯರು ತಿಳಿಸುತ್ತಾರೆ. ಅಲ್ಲದೆ ಇದಕ್ಕೆ ಆಧಾರವಾಗಿ ದ್ರೋಣಾಚಾರ್ಯರದೆಂದು ಹೇಳಲಾಗುವ ಮೂರ್ತಿಶಿಲ್ಪವೊಂದನ್ನು ತೋರಿಸುತ್ತಾರೆ. ಆದರೆ ವಿದ್ವಾಂಸರ ಹೇಳಿಕೆ ಪ್ರಕಾರ ಇದು ದ್ರೋಣಾಚಾರ್ಯರ ಶಿಲ್ಪವಲ್ಲ, ಆಚಾರ್ಯರ ಲಕ್ಷಣಗಳನ್ನು ಇದು ಒಳಗೊಂಡಿಲ್ಲ. ಶಿಲ್ಪದ ಆಧಾರದ ಮೇಲೆ 'ದ್ರೋಣಪುರ'ವೆಂಬ ಸ್ಥಳೀಯರ ಹೇಳಿಕೆಯು ಸಮಂಜಸವಲ್ಲದಿದ್ದರೂ ಶಾಸನಗಳು ರೋಣವನ್ನು 'ಮಹಾಅಗ್ರಹಾರ ರೋಣ', ೧೦೪ ಮಹಾಜನರನ್ನು ಇದು ಒಳಗೊಂಡಿತ್ತು ಎಂದು ಪ್ರಸ್ತಾಪಿಸುತ್ತವೆ. ಶಾಸನಗಳಲ್ಲಿ ದ್ರೋಣಪುರ ಎಂಬ ಉಲ್ಲೇಖವಿಲ್ಲದಿದ್ದರೂ 'ದ್ರೋಣ, ದ್ರೋಣಿ, ದೋಣಿರೆ' ಎಂಬ ಪದಗಳು ಉಲ್ಲೇಖಗೊಂಡಿವೆ. ಈ ನಿಟ್ಟಿನಲ್ಲಿ ಇದು ಸ್ಥಳೀಯರ ಹೇಳಿಕೆಗೆ ಪುಷ್ಠಿ ನೀಡುತ್ತದೆ ಎಂದು ಹೇಳಬಹುದು.

ರೋಣ ತಾಲೂಕಿನ ಇತಿಹಾಸ ಕಾಲದೆಡೆಗೆ ದೃಷ್ಠಿ ಬೀರಿದಾಗ ಇಲ್ಲಿ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ದೇವಗಿರಿಯ

ಯಾದವರು, ಯಲಬುರ್ಗಿಯ ಸಿಂಧರು, ಹೊಯ್ಸಳರು, ವಿಜಯನಗರದ ಅರಸರು ಆಳ್ವಿಕೆ ನಡೆಸಿದ್ದರೆಂದು ಶಾಸನಾಧಾರಗಳಿಂದ ತಿಳಿದುಬರುತ್ತದೆ. ಈ ಎಲ್ಲ ಅರಸು ಮನೆತನಗಳು ತಮ್ಮ ಸ್ಮರಣಾರ್ಥವಾಗಿ ಹಲವಾರು ಸ್ಮಾರಕಗಳು ಹಾಗೂ ಶಾಸನಗಳನ್ನು ಉಳಿಸಿ ಹೋಗಿದ್ದಾರೆ. ಇಂದು ಅವುಗಳು ಅಂದಿನ ಚರಿತ್ರೆಯನ್ನು ತಿಳಿಸುವ ಬಹುಮುಖ್ಯ ಪುರಾತತ್ವೀಯ ಆಕರಗಳಾಗಿದ್ದು, ಸಂಶೋಧಕರನ್ನು ತಮ್ಮೆಡೆಗೆ ಬರಮಾಡಿಕೊಳ್ಳುತ್ತಿವೆ. ಮುಖ್ಯವಾಗಿ ದೇವಾಲಯಗಳು ಅಂದಿನ ಸಮಾಜದ ಅವಿಭಾಜ್ಯ ಅಂಗಗಳಾಗಿದ್ದವು. ಅಲ್ಲದೆ ಇವುಗಳು ನಿರ್ವಹಿಸುತ್ತಿದ್ದ ಪಾತ್ರವೂ ಅಷ್ಟೇ ಮಹತ್ವದ್ದಾಗಿತ್ತು. ಈ ದೇವಾಲಯಗಳು ಕೇವಲ ಧಾರ್ಮಿಕ ಕೇಂದ್ರಗಳಾಗಿ ಉಳಿಯದೇ ಹಲವು ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸುವ ಸಂಸ್ಥೆಗಳಂತೆ ಕಾರ್ಯನಿರ್ವಹಿಸುತ್ತಿದ್ದವು. ಇಂತಹ ದೇವಾಲಯಗಳು ಬೇರೆ ಬೇರೆ ಅರಸು ಮನೆತನಗಳ ಕಾಲದಲ್ಲಿ ಭಿನ್ನ-ವಿಭಿನ್ನ ಶೈಲಿಗಳಲ್ಲಿ ನಿರ್ಮಾಣವಾಗಿವೆ. ಹೀಗೆ ನಿರ್ಮಾಣವಾದ ದೇವಾಲಯಗಳು ವಿಭಿನ್ನ ಶೈಲಿಗಳನ್ನು ಪರಿಚಯಿಸುವುದರ ಮೂಲಕ ಆಯಾ ಕಾಲದಲ್ಲಿನ ರಾಜಮನೆತನದ ಆಳ್ವಿಕೆಯ ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಧಾರ್ಮಿಕ ಸ್ಥಿತಿಗತಿಗಳನ್ನು ಮೌನವಾಗಿಯೇ ವಿವರಿಸುತ್ತಿವೆ. ಈ ಪ್ರದೇಶದಲ್ಲಿ ಹಲವು ಅರಸು ಮನೆತನಗಳು ಆಳ್ವಿಕೆ ನಡೆಸಿದ್ದರೆಂಬುದಕ್ಕೆ ಪುರಾವೆಗಳು ದೊರೆತರೂ ಕೂಡ ದೇವಾಲಯಗಳಲ್ಲಿ ಕೇವಲ ರಾಷ್ಟ್ರಕೂಟರ, ಕಲ್ಯಾಣಚಾಲುಕ್ಯ ಹಾಗೂ ವಿಜಯನಗರೋತ್ತರ ಕಾಲದ ದೇವಾಲಯಗಳು ನಿರ್ಮಾಣಗೊಂಡಿವೆ. ಇವೆಲ್ಲವು ಶೈವ, ವೈಷ್ಣವ ಹಾಗೂ ಜೈನ ಧರ್ಮಕ್ಕೆ ಸಂಬಂಧಿಸಿದ್ದರೂ ಅವುಗಳಲ್ಲಿ ಹೆಚ್ಚಿನ ದೇವಾಲಯಗಳು ಶೈವ ದೇವಾಲಯಗಳೇ ಅಗಿವೆ. ಆದ್ದರಿಂದ ಇಲ್ಲಿ ಇಷ್ಟು ಪ್ರಮಾಣದ ಶೈವದೇವಾಲಯಗಳು ನಿರ್ಮಾಣವಾಗಲು ಕಾರಣಗಳೇನೆಂಬುದಕ್ಕೆ ಉತ್ತರವನ್ನು ಈ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ. ಇಲ್ಲಿ ಅತಿ ಹೆಚ್ಚು ಶೈವ ದೇವಾಲಯಗಳು ನಿರ್ಮಾಣವಾಗಲು ಪ್ರಬಲವಾಗಿ ಬೇರೂರಿದ್ದ ಶೈವ ಧರ್ಮವೇ ಕಾರಣವೆಂದು ಹೇಳಬಹುದು. ಕ್ರಿ.ಶ.೭ನೇ ಶತಮಾನದ ಬಾದಾಮಿಯ ಶಾಸನವೊಂದು 'ರೋಣದ ಶಿವಾಲಯ' ಎಂದು ಉಲ್ಲೇಖಿಸಿರುವುದರಿಂದ ಇಲ್ಲಿನ ಶೈವ ಧರ್ಮವು ಅದಕ್ಕಿಂತಲೂ ಪೂರ್ವದಲ್ಲಿತ್ತೆಂದು ಊಹಿಸಬಹುದಾಗಿದೆ. ಶೈವ ಧರ್ಮದ ಪ್ರಮುಖ ಪಂಥಗಳೊಲ್ಲೊಂದಾದ ಕಾಳಾಮುಖ ಪಂಥವು ವ್ಯಾಪಕವಾಗಿ ಹರಡಿಕೊಂಡಿರುವುದರಿಂದ ಈ ಪ್ರದೇಶದಲ್ಲಿ ಶೈವ ಧರ್ಮ ಅತ್ಯಂತ ಪ್ರಬಲವಾಗಿರುವುದು ತಿಳಿದುಬರುತ್ತದೆ. ರೋಣ ತಾಲೂಕಿನಲ್ಲಿ ದೊರೆತ ಹಲವಾರು ಶಾಸನಗಳು ಕಾಳಾಮುಖ ಪಂಥದವರನ್ನು ಉಲ್ಲೇಖೀಸುತ್ತವೆ. ಈ ಕಾಳಾಮುಖ ಪಂಥದವರು ದೇವಾಲಯಗಳನ್ನು ನಿರ್ಮಿಸಿ ಶೈವಧರ್ಮವನ್ನು ಹರಡಿದ್ದಲ್ಲದೇ ವಿದ್ಯೆಗೆ ಪ್ರಾಮುಖ್ಯತೆ ನೀಡಿ ದೇವಾಲಯಗಳ ಮೂಲಕ ವಿದ್ಯಾದಾನದ

ಕಾರ್ಯವನ್ನು ಮಾಡುತ್ತಿದ್ದರು. ಅದರಲ್ಲೂ ತ್ರಿಕೂಟ ಹಾಗೂ ತ್ರೈಪುರುಷ ದೇವಾಲಯಗಳು ಕಾಳಾಮುಖ ಪಂಥದ ಘಟಿಕಾಸ್ಥಾನಗಳಾಗಿದ್ದವು. ಈ ಹೇಳಿಕೆಯನ್ನು ಸಮರ್ಥಿಸಿಕೊಳ್ಳಲೆಂಬಂತೆ ಹಲವಾರು ಶಾಸನಗಳಲ್ಲಿ ಕಾಳಾಮುಖ ಗುರುಗಳ ಉಲ್ಲೇಖಗಳು ಕಂಡುಬರುತ್ತವೆ. ಅಲ್ಲದೆ ಸೂಡಿಯ ಶಾಸನವೊಂದು ಕಾಳಮುಖ ವಿದ್ಯಾರ್ಥಿಗಳ ಕುರಿತು ಉಲ್ಲೇಖಿಸಿರುವುದು ಗಮನಾರ್ಹ ವಿಷಯವಾಗಿದೆ. ಹೀಗೆ ಇಲ್ಲಿಯ ತ್ರಿಕೂಟ-ತ್ರೈಪುರುಷ ದೇವಾಲಯಗಳು ಘಟಿಕಾಸ್ಥಾನಗಳಾಗಿ ಕಾರ್ಯ ನಿರ್ವಹಿಸಿದ್ದುದು ತಿಳಿದುಬರುತ್ತದೆ. ಆದ್ದರಿಂದಲೇ ರೋಣವನ್ನು ಶಾಸನಗಳಲ್ಲಿ 'ಮಹಾ ಅಗ್ರಹಾರ ರೋಣ' ಎಂದು ಉಲ್ಲೇಖಿಸಲಾಗಿದೆ ಎಂಬುದನ್ನು ತಿಳಿಯಬಹುದು. ಈ ಎಲ್ಲ ಆಧಾರಗಳ ಹಿನ್ನೆಲೆಯಲ್ಲಿ ರೋಣ ಪ್ರದೇಶವು ಶೈವ ಧರ್ಮದ ಪ್ರಮುಖ ಕೇಂದ್ರವಾಗಿತ್ತು. ಆದ್ದರಿಂದಲೇ ಶೈವ ದೇವಾಲಯಗಳು ಅಧಿಕ ಪ್ರಮಾಣದಲ್ಲಿ ನಿರ್ಮಾಣಗೊಂಡವು ಎಂದು ಸಮರ್ಥಿಸಿಕೊಳ್ಳಬಹುದಾಗಿದೆ.

ರೋಣ ತಾಲೂಕಿನಲ್ಲಿ ಒಟ್ಟು ೬೫ ಕ್ಕಿಂತಲೂ ಹೆಚ್ಚು ದೇವಾಲಯಗಳು ಕಂಡುಬರುತ್ತವೆ. ಅವುಗಳಲ್ಲಿ ಶೈವ, ಜೈನ, ವೈಷ್ಣವ ಧರ್ಮದ ದೇವಾಲಯಗಳಿದ್ದರೂ ೫೦ಕ್ಕಿಂತಲೂ ಹೆಚ್ಚು ದೇವಾಲಯಗಳು ಶೈವ ದೇವಾಲಯಗಳಾಗಿವೆ. ಹಲವು ದೇವಾಲಯಗಳು ಏಕಕೂಟದವುಗಳಾಗಿದ್ದು, ರೋಣ ಮತ್ತು ಸೂಡಿಗಳಲ್ಲಿ ದ್ವಿಕೂಟ ದೇವಾಲಯಗಳನ್ನು ಕಾಣಬಹುದಾಗಿದೆ. ಸೂಡಿಯಲ್ಲಿರುವ 'ಜೋಡಿ ಕಲಶ' ದೇವಾಲಯವು ಹೆಸರೇ ಸೂಚಿಸುವಂತೆ ದ್ವಿಕೂಟ ದೇವಾಲಯವಾಗಿದ್ದು, ಕಲೆ ವಾಸ್ತುಶಿಲ್ಪದ ವಿಶಿಷ್ಟತೆಗೆ ಪ್ರಾಮುಖ್ಯತೆಯನ್ನು ಪಡೆದಿದೆ. ಇನ್ನು, ತ್ರಿಕೂಟ ದೇವಾಲಯಗಳು ರೋಣ ತಾಲೂಕಿನಲ್ಲಿ ಪ್ರಮುಖವಾಗಿ ಕಂಡುಬರುವ ದೇವಾಲಯಗಳಾಗಿವೆ. ಇವುಗಳು ತ್ರಿಮೂರ್ತಿಗಳಾಗಿ ನಿರ್ಮಿಸಿದ ದೇವಾಲಯಗಳಾಗಿವೆ. ಅಲ್ಲದೆ ಇವುಗಳು ರೋಣ ಒಂದು ಘಟಿಕಾಸ್ಥಾನವಾಗಿತ್ತೆಂದು ಹೇಳುವ ಸಂದರ್ಭದಲ್ಲಿ ಪ್ರಮುಖ ಆಧಾರಗಳಾಗಿವೆ. ಮುಖ್ಯವಾದ ಸಂಗತಿಯೆಂದರೆ ಕೆಲವು ದೇವಾಲಯಗಳಲ್ಲಿ ಒಂದೇ ಪೀಠದ ಮೇಲೆ ಬ್ರಹ್ಮ, ಶಿವಲಿಂಗ ಹಾಗೂ ವಿಷ್ಣುವಿನ ಮೂರ್ತಿಗಳನ್ನು ವಾಹನಗಳ ಸಮೇತ ಕೆತ್ತಲಾಗಿದೆ. ಇದು ಅತಿ ವಿರಳವಾಗಿ ಕಂಡುಬರುವ ಚಿತ್ರಣವಾಗಿದೆ. ಇಲ್ಲಿ ತ್ರಿಕೂಟಗಳಂತೆ ಪ್ರತಿಯೊಂದು ದೇವತೆಗೂ ಪ್ರತ್ಯೇಕ ಗರ್ಭಗೃಹಗಳನ್ನು ನಿರ್ಮಿಸದೆ, ಆ ಕಲ್ಪನೆಯನ್ನು ಒಂದೇ ಪೀಠದ ಮೇಲೆ ತ್ರಿಮೂರ್ತಿಗಳನ್ನು ಸ್ಥಾಪಿಸುವ ಮೂಲಕ ಪೂರೈಸಿಕೊಳ್ಳಲಾಗಿದೆ. ಇಂತಹ ದೇವಾಲಯಗಳು ಸವಡಿ ಹಾಗೂ ನಿಡಗುಂದಿಯಲ್ಲಿ ಕಂಡುಬರುತ್ತದೆ. ಸವಡಿಯ ಬ್ರಹ್ಮೇಶ್ವರ ದೇವಾಲಯ ಹಾಗೂ ನಿಡಗುಂದಿಯ ನಾರಾಯಣ ದೇವಾಲಯಗಳೆರಡು ಒಂದೇ ಪೀಠದ ಮೇಲೆ ತ್ರಿಮೂರ್ತಿಗಳ ಸ್ಥಾಪನೆಯನ್ನು ಹೊಂದಿವೆ.

ಅಲ್ಲದೆ ಈ ದೇವಾಲಯಗಳು ಶಾಸನೋಕ್ತ ದೇವಾಲಯಗಳಾಗಿವೆ. ಇಂತಹ ತ್ರೈಪುರುಷ ದೇವಾಲಯಗಳು ಮುಂದೆ ತ್ರಿಕೂಟ ದೇವಾಲಯಗಳ ನಿರ್ಮಾಣಕ್ಕೆ ದಾರಿ ಮಾಡಿಕೊಟ್ಟು ಈ ತಾಲೂಕಿನಲ್ಲಿ ತ್ರಿಕೂಟ ದೇವಾಲಯಗಳಾಗಿ ಸೂಡಿ, ನಿಡಗುಂದಿಗಳ ನರೆಗಲ್ಲ ಕೊಡಗಾನೂರುಗಳಲ್ಲಿ ಕಂಡುಬರುತ್ತವೆ. ಇಲ್ಲಿ ತ್ರಿಮೂರ್ತಿಗಳಿಗೆ ಪ್ರತ್ಯೇಕವಾದ ಗರ್ಭಗೃಹಗಳನ್ನು ನಿರ್ಮಿಸಲಾಗಿದೆ. ಇಂತಹ ತ್ರಿಕೂಟ ದೇವಾಲಯ ಅಂದಿನ ಸಮಾಜದಲ್ಲಿ ಪ್ರಮುಖ ಪಾತ್ರವಿರ್ವಹಿಸುತ್ತಿದ್ದವು.

ಒಟ್ಟಾರೆಯಾಗಿ ಪ್ರಸ್ತುತ ಅಧ್ಯಯನದಿಂದ ಕೆಲವು ಪ್ರಮುಖ ಅಂಶಗಳನ್ನು ಕಂಡುಕೊಳ್ಳಲಾಗಿದೆ. ರೋಣ ತಾಲೂಕಿನಲ್ಲಿ ಶೈವಧರ್ಮವು ಪ್ರಬಲ್ಯವನ್ನು ಪಡೆದುಕೊಂಡಿದ್ದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಎಂಬುದನ್ನು ಇಲ್ಲಿ ನಿರ್ಮಾಣವಾಗಿರುವ ಶೈವ ದೇವಾಲಯಗಳಿಂದ ತಿಳಿಯಬಹುದಾಗಿದೆ. ಈ ದೇವಾಲಯಗಳು ಕೇವಲ ಶೈವಧರ್ಮದ ಸಂಕೇತಗಳಾಗಿರದೆ ಇವು ವಿದ್ಯಾಕೇಂದ್ರಗಳಾಗಿ, ಆರ್ಥಿಕ ಸಂಸ್ಥೆಗಳಾಗಿ, ಮನರಂಜನ ಚಟುವಟಿಕೆಯ ಕೇಂದ್ರಗಳಾಗಿದ್ದವು ಎಂಬುದನ್ನು ತಿಳಿಯಬಹುದಾಗಿದೆ.

## ಅನುಬಂಧಗಳು

೧. ನಕ್ಷೆ

೨. ಗ್ರಂಥಋಣ

೩. ತಲಾನಕ್ಷೆ

೪. ಛಾಯಾಚಿತ್ರಗಳು

## ೨. ನಕ್ಷೆಗಳು




ಗದಗ ಜಿಲ್ಲೆ




ರೋಣ ತಾಲೂಕು



ಪ್ರಾಚೀನ ಆಡಳಿತ ವಿಭಾಗಗಳು

## ೩. ಗ್ರಂಥಋಣ


೧. ಅಪರ್ಣ ಕೂ.ಸ., ದೇವಾಲಯ ವಾಸ್ತುಶಿಲ್ಪ ಪರಿಚಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೯.

೨. ಅನಂತರಂಗಾಚಾರ್ ಎನ್., ಕರ್ನಾಟಕದ ವಾಸ್ತುಶಿಲ್ಪ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೨

೩. ಇತಿಹಾಸ ದರ್ಶನ ಸಂಪುಟಗಳು, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೧೯೮೬-೨೦೦೮

೪. ಕಲಬುರ್ಗಿ ಎಂ.ಎಂ.(ಸಂ), ಧಾರವಾಡ ಜಿಲ್ಲೆಯ ಶಾಸನಸೂಚಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೫

೫. ಕಡಪಟ್ಟಿ ಎಮ್.ಎನ್., ಪ್ರಾಚೀನ ಕರ್ನಾಟಕದಲ್ಲಿ ಶೈವಧರ್ಮ, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೨೦೦೮

೬. ಕಾಂಬ್ಳೆ ಎಂ.ಟಿ., ಸೂಡಿ ಒಂದು ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಎಂ.ಫಿಲ್ .ಪ್ರಬಂಧ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೦.

೭. ಕಾಕೋಳು ರಾಘವೇಂದ್ರ ಮತ್ತು ರಮೇಶ್ ಬಿ.ಗೋ., ಕರ್ನಾಟಕ ದೇವಾಲಯಗಳು, ಹಂಸಧ್ವನಿ ಪ್ರಕಾಶನ, ೧೯೯೪

೮. ಕೃಷ್ಣರಾಯ ಅ.ನ.(ಸಂ), ಭಾರತೀಯ ಸಂಸ್ಕೃತಿ ದರ್ಶನ, ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ ಮೈಸೂರು ಸರ್ಕಾರ, ಬೆಂಗಳೂರು, ೧೯೬೨

೯. ಗೋಪಾಲ ಆರ್.(ಸಂ), ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೦೬

೧೦. ಗೋಪಾಲರಾವ್ ಎಚ್.ಎಸ್., ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯ ದೇವಾಲಯಗಳು: ಒಂದು ಸಾಂಸ್ಕೃತಿಕ ಅಧ್ಯಯನ, ಪ್ರಾಚ್ಯವಸ್ತು ಸಂಗ್ರಹಾಲಯಗಳು ನಿರ್ದೇಶನಾಲಯ, ಮೈಸೂರು, ೧೯೯೩

೧೧. ಗೋಪಾಲರಾವ್ ಹೆಚ್.ಎಸ್.(ಸಂ), ರಾಷ್ಟ್ರಕೂಟ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು, ೨೦೦೪

೧೨. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಂ.೧, (ಕ್ರಿ.ಶ.೪೫೦-೧೧೫೦), ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೨

೧೩. ಚಿದಾನಂದಮೂರ್ತಿ ಎಮ್., ಬಸವಣ್ಣ : ಕರ್ನಾಟಕ - ಭಾರತ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೪

೧೪. ಚಿದಾನಂದಮೂರ್ತಿ ಎಮ್., ಸ್ಥಾವರ : ಜಂಗಮ, ಸಂಪುಟ-IV, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೪

೧೫. ದೇಸಾಯಿ ಪಿ.ಬಿ., ಕನ್ನಡ ನಾಡಿನ ಶಾಸನಗಳು, ಕನ್ನಡ ಸಂಶೋಧನಾ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೧

೧೬. ನರಸಿಂಹಮೂರ್ತಿ ಎ.ವಿ., ಚಾಲುಕ್ಯ ವಾಸ್ತುಶಿಲ್ಪ ಪರಿಚಯ, ಐಬಿಹೆಚ್ ಪ್ರಕಾಶನ, ಬೆಂಗಳೂರು, ೧೯೭೬

೧೭. ನರೇಗಲ್ಲ ಎಂ.ಎಸ್., ಉತ್ತರ ಗದಗ ಜಿಲ್ಲೆಯ ಶಾಸನಗಳು : ಒಂದು ಅಧ್ಯಯನ, ಅಪ್ರಕಟಿತ ಪಿಎಚ್‌ಡಿ ಮಹಾಪ್ರಬಂಧ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೭

೧೮. ನಾಗರಾಜ ಹು. ತೇರದಾಳ, ರೋಣ ತಾಲೂಕಿನ ಪ್ರಾಚ್ಯಾವಶೇಷಗಳು : ಒಂದು ಅಧ್ಯಯನ, ಅಪ್ರಕಟಿತ ಎಂ.ಫಿಲ್. ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೫.

೧೯. ನಂದೀಮಠ ಎಸ್.ಸಿ., "ಕನ್ನಡ ನಾಡಿನ ಚರಿತ್ರೆ - ಕರ್ನಾಟಕದ ಧರ್ಮಗಳು", ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮

೨೦. ನಂಜುಂಡಪ್ಪ ವೈ.ಡಿ., ಪುರಾಣ ದೇವತೆಗಳ ಪರಾಮರ್ಶೆ ಮತ್ತು ದೇವರು, ಸಿದ್ಧ ಸಾಹಿತ್ಯ ಪ್ರಕಾಶನ, ಅರಸೀಕೆರೆ, ೨೦೦೫

೨೧. ಪರಮಶಿವಮೂರ್ತಿ ಡಿ.ವಿ., ಕನ್ನಡ ಶಾಸನ ಶಿಲ್ಪ, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೨೨. ಪ್ರಭುಶಂಕರ (ಪ್ರ.ಸಂ), ಶಿವಪ್ಪ ಕೆ.ಸಿ.(ಸಂ), ಮಲೆಯೂರು ಗುರುಸ್ವಾಮಿ(ಸಹ.ಸಂ), ವಿಶ್ವಧರ್ಮ ದರ್ಶನ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೦೩

೨೩. ಪ್ರಭಾಕರ್ ಎಮ್.ಎನ್., **ದೇವಾಲಯ ವಾಸ್ತು ಚಂದ್ರಿಕೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೨೪. ಬಸವಾನಿ ರಾಮಶರ್ಮಾ, ಕೃಷ್ಣಮೂರ್ತಿ ಜಿ.ಎಚ್.(ಸಂ), ತ.ರಾ.ಸು.(ಪ್ರಸಂ), **ಶ್ರೀ ಶಿವಾರ್ಪಣಂ,** ಗೀತಾ ಬುಕ್ ಹೌಸ್, ಮೈಸೂರು, ೧೯೮೫

೨೫. ಬಾಲಸುಬ್ರಹ್ಮಣ್ಯ, ವಾಸುದೇವನ್ ಸಿ.ಎಸ್, ರಮೇಶ ನಾಯಕ, **ಕರ್ನಾಟಕ ದೇವಾಲಯ ಕೋಶ - ಗದಗ ಜಿಲ್ಲೆ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೨೬. ಮರಿಶಾಮಾಚಾರ್ ಎನ್., **ಭಾರತೀಯ ಶಿಲ್ಪಕಲೆ,** ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು, ೨೦೦೦

೨೭. ಮಾಗಡಿ ರಂಗನರಸಿಂಹಯ್ಯ, **ಶಿವ ಮಹಾಪುರಾಣ,** ಸಾಹಿತ್ಯ ನಂದನ, ಬೆಂಗಳೂರು, ೨೦೦೫

೨೮. ಮಲ್ಲೇಪುರಂ ಜಿ. ವೆಂಕಟೇಶ (ಸಂ), **ಶಿವತತ್ವ ರತ್ನಾಕರ,** ಸಂಪುಟಗಳು (I ಮತ್ತುII), ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೨೯. ರಹಮತ್ ತರೀಕೆರೆ (ಸಂ), **ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ - ೩, ಧರ್ಮ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೩೦. ರಾಮನಾಥಯ್ಯ ಕೆ.ಪಿ, ಮತ್ತು ನಾರಾಯಣರಾವ್ ಎಚ್., **ವಿವಿಧ ಮತಗಳ ಚಾರಿತ್ರಿಕ ವಿಮರ್ಶೆ ಮತ್ತು ಸಮನ್ವಯ,** ಕಾರೊನೇಷ್ನ ಪ್ರೆಸ್, ಮೈಸೂರು

೩೧. ಶಿವರಾಮ ಕಾರಂತ, **ಚಾಲುಕ್ಯ ವಾಸ್ತು ಮತ್ತು ಶಿಲ್ಪ,** ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು, ೧೯೯೧

೩೨. ಶಿವರಾಮ ಕಾರಂತ, **ಭಾರತೀಯ ಶಿಲ್ಪ,** ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು, ೧೯೭೫

೩೩. ಶಿವಕುಮಾರಸ್ವಾಮಿ ಎಮ್., **ಶೈವಾಗಮಗಳು - ಒಂದು ಅಧ್ಯಯನ,** ಶ್ರೀ ಸಿದ್ಧವೀರ ಶಿವಚಾರ್ಯ ಜ್ಞಾನ ಪ್ರಕಾಶನ, ಬಳ್ಳಾರಿ, ೧೯೯೪

೩೪. ಶ್ರೀಧರ ಬಿ.ಎಚ್., **ಭಾರತೀಯ ಮೂರ್ತಿಶಿಲ್ಪ,** ರಂಗಸಂಗ ಮತ್ತು ಕಲಾರಂಗ, ಶಿರಸಿ, ೧೯೮೮

೩೫. ಶ್ರೀ ಇಮ್ಮಡಿ ಶಿವಬಸವಸ್ವಾಮಿಗಳು (ಅನು), **ಸಾಯಣ ಮಾಧವ ಪ್ರಣೀತ ಸರ್ವ ದರ್ಶನ ಸಂಗ್ರಹ**, ಜಗದ್ಗುರು ಶ್ರೀ ಶಿವರಾತ್ರೇಶ್ವರ ಗ್ರಂಥಮಾಲೆ, ಮೈಸೂರು, ೧೯೯೯

೩೬. ವಿರೂಪಾಕ್ಷ ಕುಲಕರ್ಣಿ (ಅನು), **ಕಾಪಾಲಿಕರು ಮತ್ತು ಕಾಳಾಮುಖರು**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೫

೩೭. ವೇದಾಂತಾಚಾರ್ಯ, ಶ್ರೀ ನಿ.ಪ್ರ.ಶ್ರೀ ಶಿವಕುಮಾರ ಸ್ವಾಮಿಗಳು (ಅನು), **ಭಾರತೀಯ ಸಂಸ್ಕೃತಿ - ಭಾಗ-೧**, ಶ್ರೀ ನಿರಂಜನಾ ಪ್ರಿಂಟರ್ಸ್, ಬೆಂಗಳೂರು, ೧೯೮೩

೩೮. ಸಿಂದಗಿ ರಾಜಶೇಖರ, **ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ**, ಸುಜಾತಾ ಪಬ್ಲಿಕೇಶನ್ಸ್, ಧಾರವಾಡ, ೧೯೮೮

೩೯. ಸುಂದರ ಅ.(ಸಂ), ಷೇಕ್ ಅಲಿ, (ಪ್ರ.ಸಂ), **ಕರ್ನಾಟಕ ಚರಿತ್ರೆ**, ಸಂಪುಟ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

೪೦. ಸೂರ್ಯನಾಥ ಯು.ಕಾಮತ್ (ಸಂ), **ಧಾರವಾಡ ಜಿಲ್ಲಾ ಗ್ಯಾಸೆಟಿಯರ್**, ಕರ್ನಾಟಕ ಸರಕಾರ, ಬೆಂಗಳೂರು, ೧೯೯೫

೪೧. ಹರಿದಾಸ ಭಟ್ಟಾಚಾರ್ಯ (ಸಂ), **ಯುಗಯಾತ್ರೀ ಭಾರತೀಯ ಸಂಸ್ಕೃತಿ(ಧರ್ಮಗಳು)** ಸಂಪುಟ-IV, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೮

೪೨, ಹಿರೇಮಠ ಆರ್.ಸಿ., **ಮಹಾಯಾತ್ರೆ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

೪೩. ಹೊನವಾಡ ವ್ಹಿ.ಕೆ., **"ರೋಣ ತಾಲೂಕಿನ ಶಾಸನಗಳು"**, ಅಪ್ರಕಟಿತ ಎಂ.ಫಿಲ್ . ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೭

೪೪. ಜ್ಞಾನಾನಂದ ಜಿ., **ಶಿಲ್ಪಾದರ್ಶ**, ಸಂಪುಟ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೪೫. ಜ್ಞಾನಾನಂದ ಜಿ., **ಶಿಲ್ಪಾದರ್ಶ**, ಸಂಪುಟ-೨, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೪೬. ಜ್ಞಾನಾನಂದ ಜಿ., **ಶ್ರೀ ಕಾಶ್ಯಪ ಶಿಲ್ಪ ಶಾಸ್ತ್ರಂ (ಉತ್ತಾರಾರ್ಧ)**, ಕರ್ನಾಟಕ ಶಿಲ್ಪ ಕಲಾ ಅಕಾಡೆಮಿ, ಬೆಂಗಳೂರು, ೧೯೯೭

೪೭. ಜ್ಞಾನಾನಂದ ಜಿ., **ಶ್ರೀ ಕಾಶ್ಯಪ ಶಿಲ್ಪ ಶಾಸ್ತ್ರಂ (ಪೂರ್ವಾರ್ಧ, ಸಂ-೧)**, ಕರ್ನಾಟಕ ಶಿಲ್ಪ ಕಲಾ ಅಕಾಡೆಮಿ, ಬೆಂಗಳೂರು, ೨೦೦೪

## ೩. ತಲಾನಕ್ಷೆಗಳು




ಸತ್ಯನಾರಾಯಣ ದೇವಾಲಯ, ನರೇಗಲ್ಲು

ಕೃಪೆ: ಗ್ಯಾರಾರ್ಡ ಘೋಕೆಮಾ:ಚಾಲುಕ್ಯ ಆರ್ಕಿಟೆಕ್ಚರ್, ಪು.೫೯೨



ರಾಮಲಿಂಗ ದೇವಾಲಯ(Schematic Plan), ರೋಣ

ಕೃಪೆ : ಗ್ಯಾರಾರ್ಡ ಘೋಕೆಮಾ:ಚಾಲುಕ್ಯ ಆರ್ಕಿಟೆಕ್ಚರ್, ಪು.೬೫೭



ಈಶ್ವರ ದೇವಾಲಯ(Schematic Plan), ರೋಣ

ಕೃಪೆ : ಗ್ಯಾರಾರ್ಡ ಘೋಕೆಮಾ:ಚಾಲುಕ್ಯ ಆರ್ಕಿಟೆಕ್ಚರ್, ಪು.೬೪೬



ತ್ರಿಮೂರ್ತಿ ದೇವಾಲಯ(Schematic Plan), ಸವಡಿ



ಮಲ್ಲಿಕಾರ್ಜುನ ದೇವಾಲಯ(Schematic Plan), ಸೂಡಿ



ಕೃಪೆ : ಗ್ಯಾರಾರ್ಡ ಘೋಕೆಮಾ:ಚಾಲುಕ್ಯ ಆರ್ಕಿಟೆಕ್ಚರ್

ಕಸುಮೇಶ್ವರ ದೇವಾಲಯ(Schematic Plan), ಕರ್ಮುಡಿ



ಕೃಪೆ : ಗ್ಯಾರಾರ್ಡ ಘೋಕೆಮಾ:ಚಾಲುಕ್ಯ ಆರ್ಕಿಟೆಕ್ಚರ್, ಪು.೨೦೧

ಜೋಡಿ ಕಳಸ ಗುಡಿ ದೇವಾಲಯ(Schematic Plan), ಸೂಡಿ



ಶಂಭುಲಿಂಗ ದೇವಾಲಯ(Schematic Plan), ಇಟಗಿ

ಕೃಪೆ: ಗ್ಯಾರಾರ್ಡ್ಡ ಘೋಕೆಮಾ:ಚಾಲುಕ್ಯ ಆರ್ಕಿಟೆಕ್ಚರ್, ಪು.೩೯



ಲೋಕನಾಥ ದೇವಾಲಯ(Schematic Plan), ಕಲ್ಲುಗುಡಿ

ಕೃಪೆ: ಗ್ಯಾರಾರ್ಡ್ಡ ಘೋಕೆಮಾ:ಚಾಲುಕ್ಯ ಆರ್ಕಿಟೆಕ್ಚರ್

# ಛಾಯಾಚಿತ್ರಗಳು



ರಾಮಲಿಂಗೇಶ್ವರ ದೇವಾಲಯ, ರಾಜೂರು



ದ್ರೋಣಾಚಾರ್ಯರ ಶಿಲ್ಪ, ರೋಣ



ಕಲ್ಮೇಶ್ವರ ದೇವಾಲಯದ ಬಾಗಿಲು ತೋರಣ, ರೋಣ



ಈಶ್ವರ ದೇವಾಲಯದ ಮುಂದಿರುವ ರಾಷ್ಟ್ರಕೂಟ ಕಾಲದ ಶಾಸನ, ರೋಣ



ಬ್ರಹ್ಮದೇವರ ದೇವಾಲಯದ ಒಂದೇ ಪೀಠದಲ್ಲಿರುವ ತ್ರೈಪುರುಷರು, ಸವಡಿ



ದೊಡ್ಡಲಿಂಗೇಶ್ವರ ದೇವಾಲಯದಲ್ಲಿರುವ ಉಮಾಹೇಶ್ವರರ ಶಿಲ್ಪ, ಸವಡಿ



ಈಶ್ವರ ದೇವಾಲಯದ ಎದುರಿಗಿರುವ ನಂದಿ ಶಿಲ್ಪ, ರೋಣ



ಕಲ್ಮೇಶ್ವರ ದೇವಾಲಯದ ನವರಂಗ, ರೋಣ



ರಾಮಲಿಂಗ ದೇವಾಲಯ, ಬೊಮ್ಮಸಾಗರ



ನಾರಾಯಣ ದೇವಾಲಯದ ಸಭಾಮಂಟಪದಲ್ಲಿರುವ
ಕಂಬಗಳು, ನರೇಗಲ್



ರಾಮಲಿಂಗ ದೇವಾಲಯ, ಹಿರೇಹಾಳ



ಅನಂತಶಯನ ದೇವಾಲಯದಲ್ಲಿರುವ ಅನಂತಶಯನನ ಶಿಲ್ಪ, ರೋಣ



ದಾಸಮೇಶ್ವರ ದೇವಾಲಯದಲ್ಲಿನ ಲಕ್ಷ್ಮೀನಾರಾಯಣರ ಶಿಲ್ಪ, ನಿಡಗುಂದಿ



ಕಲ್ಮೇಶ್ವರ ದೇವಾಲಯದಲ್ಲಿನ ಶಿವಲಿಂಗ, ನರೇಗಲ್









ಜೋಡಿ ಕಲಶ ದೇವಾಲಯದಲ್ಲಿನ ಛಾಯಾಚಿತ್ರಗಳು, ಸೂಡಿ



ಶಂಭುಲಿಂಗ ದೇವಾಲಯದ ಮುಖಮಂಟಪ, ಇಟಗಿ



ಸಂಗಮೇಶ್ವರ ದೇವಾಲಯ, ಊಣಚಗೇರಿ



ಕಲ್ಮೇಶ್ವರ ದೇವಾಲಯ, ತೋಟಗಂಟಿ



ಮೂಲಬ್ರಹ್ಮೇಶ್ವರ ದೇವಾಲಯ, ಕೋಡಿಕೊಪ್ಪ



ಈಶ್ವರ ದೇವಾಲಯದ ಮುಂದಿರುವ ಶಾಸನ, ಬೆಣಸಮಟ್ಟಿ



ಈಶ್ವರ ದೇವಾಲಯ, ಅಬ್ಬಿಗೇರಿ

